# ಕುವೆಂಪು ಸಾಹಿತ್ಯ ಮತ್ತು ವಿಚಾರ

ಶಿವರಾಮು ಕಾಡನಕುಪ್ಪೆ

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ
ಗೋಕುಲಂ ಮೂರನೇ ಹಂತ, ಮೈಸೂರು

**KUVEMPU SAHITYA MATTU VICHARA** - A collection of articles on Kuvempu by Prof. Shivaramu Kadanakuppe, Principal, Vidyavardhaka First Grade College, Mysore, published by Talukina Venkaniah Smaraka Granthamale, Mysore ; Second Edition 2004; pages viii + 112.



ಮುಖಚಿತ್ರ : ಶ್ರೀ ಸುಧಾಕರ ದರ್ಬೆ

ಬೆಲೆ : ಎಪ್ಪತ್ತೈದು ರೂಪಾಯಿಗಳು

ಮುದ್ರಕರು :
ಸದ್ಗುರು ಪ್ರಿಂಟರ್ಸ್, ರಾಮಾನುಜ ರಸ್ತೆ,
ಮೈಸೂರು ✆ 2442655

# ಲೇಖಕರ ಮಾತು

ಕುವೆಂಪು ಅವರ ಸಾಹಿತ್ಯ ಮತ್ತು ವಿಚಾರಗಳನ್ನು ಕುರಿತು ನಾನು ಬರೆದ ಲೇಖನಗಳ ಸಂಕಲನವಿದು. ನನ್ನ ಗುರುಗಳಾದ ಪ್ರೊ|| ದೇಜೆಗೌ ಅವರು ಈ ಕೃತಿಯನ್ನು ೧೯೯೦ ರಲ್ಲಿ ಪ್ರಕಟಿಸಿದ್ದರು. ಆ ಮುದ್ರಣದ ಎರಡನೆಯ ಆವೃತ್ತಿ ಕುವೆಂಪು ಜನ್ಮ ಶತಾಬ್ಧಿ ಸಮಯದಲ್ಲಿ ಹೊರ ಬರುತ್ತಿರುವುದು ನನಗೆ ಸಂತೋಷವನ್ನುಂಟು ಮಾಡಿದೆ.

ಮಿತ್ರರಾದ ಶ್ರೀ ಟಿ.ಎಸ್. ಛಾಯಾಪತಿಯವರು ತಮ್ಮ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಮೂಲಕ ಕೃತಿಯನ್ನು ಪ್ರಕಟಿಸುತ್ತಿದ್ದಾರೆ. ಅವರಿಗೆ ವಂದನೆಗಳು . ಈ ಪುಸ್ತಕಕ್ಕೆ ಅರ್ಥವತ್ತಾದ ಮುಖಚಿತ್ರ ರಚಿಸಿರುವ ಶ್ರೀ ಸುಧಾಕರ ದರ್ಬೆ ಅವರಿಗೂ, ಮುದ್ರಿಸಿದ ಶ್ರೀ ವಾಸು ಮತ್ತವರ ಸಿಬ್ಬಂದಿಗೂ ಕೃತಜ್ಞತೆಗಳು.

ನನ್ನ ಪತ್ನಿ ಸುವರ್ಣ, ಮಕ್ಕಳು ಡಾ. ಸುಳಿ ಮತ್ತು ನೇಸರ ನನಗೆ ನೀಡುತ್ತಿರುವ ಸಹಕಾರ ದೊಡ್ಡದು.

- ಶಿವರಾಮು ಕಾಡನಕುಪ್ಪೆ

೧೯ ಡಿಸೆಂಬರ್ ೨೦೦೪
ಮೈಸೂರು

## ಪರಿವಿಡಿ


೧. ಕುವೆಂಪು -ಒಂದು ನೋಟ ..... ೧

೨. ಪರಂಪರೆ ಸ್ವೀಕರಿಸಿ ಸಂಪ್ರದಾಯ ತಿರಸ್ಕರಿಸಿದ ಕವಿ .... ೫

೩. ಕಲ್ಕಿ-ಒಂದು ವಿಮರ್ಶೆ ..... ೧೧

೪. ಪ್ರೇತ-ಕ್ಯೂ:ಆನ್ವಯಿಕ ವಿಮರ್ಶೆ ..... ೩೮

೫. ಮಕ್ಕಳ ಸಾಹಿತ್ಯ-ಕುವೆಂಪು ದೃಷ್ಟಿಯಲ್ಲಿ ..... ೫೧

೬. ಆಧುನಿಕ ಬರಹಗಾರರ ಮೇಲೆ ಕುವೆಂಪು ಸಾಹಿತ್ಯ ಮತ್ತುವ್ಯಕ್ತಿತ್ವದ ಪ್ರಭಾವ ..... ೫೭

೭. ಜಲಗಾರ ಮತ್ತು ಸಾಮಾಜಿಕ ಪ್ರಜ್ಞೆ ..... ೬೪

೮. ವಿಶ್ವಮಾನವ ಮತ್ತು ಜಾತಿ ಮಾನವರು ..... ೭೦

೯. ಅನಿಕೇತನ -ಒಂದು ದಾರ್ಶನಿಕ ಕವಿತೆ ..... ೭೫

೧೦. ಕುವೆಂಪು ಕವನಗಳಲ್ಲಿ ರೈತ ..... ೮೧

೧೧. ಕುವೆಂಪು ಕಾದಂಬರಿಗಳಲ್ಲಿ ಪ್ರಾದೇಶಿಕತೆ ..... ೯೪

# ಕುವೆಂಪು - ಒಂದು ನೋಟ

ಕನ್ನಡ ಸಾಹಿತ್ಯ ಪರಂಪರೆ ಮತ್ತು ಕನ್ನಡ ಸಾಮಾಜಿಕ ಪರಂಪರೆಯನ್ನು ಕುವೆಂಪು ಅರ್ಥಮಾಡಿಕೊಂಡಿರುವಲ್ಲಿ ಕಾಣುವ ಭಿನ್ನತೆಯೇ ಅವರ ಸಾಹಿತ್ಯದ ಭಿನ್ನತೆಯಾಗಿರುವುದನ್ನು ಗಮನಿಸಬೇಕು. ಈ ಭಿನ್ನಿತೆಯ ಅಂಶವೇ ಆಶ್ಚರ್ಯಕರವಾಗಿ ಶಿಷ್ಟ ಸಾಹಿತ್ಯ ಪರಂಪರೆಗೆ ಒಂದು ಅಯಾಮವನ್ನು ತಂದು ಕೊಟ್ಟಿರುವುದು ಐತಿಹಾಸಿಕವಾಗಿ ಪ್ರಮುಖ ಅಂಶ. ಈ ಭಿನ್ನತೆ ವಸ್ತುಸ್ಥಿತಿಯನ್ನು ನೋಡುವ ಮತ್ತು ಅಭಿವ್ಯಕ್ತಿಸುವ ದೃಷ್ಟಿಯನ್ನು ಬದಲಿಸಿತು. ತಮ್ಮ ಸಮಕಾಲೀನರು ಕಂಡ ಭಾರತೀಯ ಪರಂಪರೆಗೂ ಕುವೆಂಪು ಕಂಡ ಪರಂಪರೆಗೂ ಮೂಲಭೂತ ವ್ಯತ್ಯಾಸವಿದೆ. ಒಂದು ಸಂಪ್ರದಾಯದ ನೆಲೆಯಲ್ಲಿ ನಿಂತು ನೋಡುವ ದೃಷ್ಟಿಯಾದರೆ, ಮತ್ತೊಂದು ಸಂಪ್ರದಾಯವನ್ನು ತಿರಸ್ಕರಿಸಿ ಸಾಂಸ್ಕೃತಿಕ ಸಾಮಾಜಿಕ ಹಿನ್ನೆಲೆಯಲ್ಲಿ ಪರಂಪರೆಯನ್ನು ಅರಿಯುವ, ಸಂವೇದಿಸುವ ದೃಷ್ಟಿ. ಸಾಮಾಜಿಕವಾಗಿ ಅಭಿವ್ಯಕ್ತಿಯನ್ನೇ ಕಾಣದ, ಪ್ರಜ್ಞೆಯ ಮಟ್ಟದಲ್ಲೆ ನಿಂತು ಬಿಡುವ ಜನಸಮೂಹದ ಒಟ್ಟಾರೆ ಅಭಿವ್ಯಕ್ತಿಯನ್ನು ಸಂವೇದನೆಯನ್ನು ಕುವೆಂಪು ದಕ್ಕಿಸಿಕೊಂಡಿದ್ದು ತಮ್ಮ ಸಮಾಕಾಲೀನರಿಗಿಂತ ಭಿನ್ನವಾಗಿ ಬರೆಯಲು ಬೆಳೆಯಲು ಅನುವು ಮಾಡಿಕೊಟ್ಟಿತು.ಪರಂಪರೆ ಎಂಬುದು ಸಂಪ್ರದಾಯಗಳಿಗಿಂತ ಭಿನ್ನವೆಂದು ಕುವೆಂಪು ಅರಿತದ್ದು ಈ ಹಿನ್ನೆಲ್ಲೆಯಿಂದಲೇ. ಅದು ಬರಹಗಾರನಿಗೆ ಸಾಂಪ್ರದಾಯಿಕವಾಗಿ ಅನುಕರಣೆಯಿಂದ ಬರುವಂಥದ್ದಲ್ಲ. ಪರಂಪರೆಯನ್ನು ಗ್ರಹಿಸುವುದಕ್ಕೆ ಲೇಖಕನಿಗೆ ಶ್ರಮ ಅವಶ್ಯಕ; ಪ್ರಯತ್ನ ಅವಶ್ಯಕ. ಸಂಪ್ರದಾಯಗಳನ್ನು ಒಂದು ತಲೆಮಾರಿನ ಮೌಲ್ಯಗಳೆಂದು ಕರೆಯುವುದು ಸಾಧ್ಯವಿಲ್ಲದ ಮಾತು. ಪರಂಪರೆ ಒಂದು ಸಂಸ್ಕೃತಿಯ ಗಟ್ಟಿ ಮೌಲ್ಯಗಳನ್ನಡಗಿಸಿಕೊಂಡಿರುವಂಥದ್ದು. ಸಂಪ್ರದಾಯ ರೂಢಿಗತವಾಗಿ ಹರಿದು ಬರುವಂಥದ್ದು, ಸುಲಭವಾಗಿ ಅನುಕರಿಸಲು ಸಾಧ್ಯವಿರುವಂಥದ್ದು. ಪರಂಪರೆ ಅನುಕರಣೆಗಿಂತ ಮಿಗಿಲಾಗಿ ಸೂಕ್ಷ್ಮ ಸಂವೇದನೆಗೆ, ಗ್ರಹಿಕೆಗೆ ಮತ್ತು ಶ್ರಮಕ್ಕೆ ಮಾತ್ರ ದಕ್ಕುವಂಥ ವಿಶಿಷ್ಟ ಅರ್ಥ-ವ್ಯಾಪ್ತಿಯನ್ನು ಪಡೆದಿರುತ್ತದೆ.

ಕುವೆಂಪು ಅವರು ವರ್ತಮಾನದಲ್ಲಿ ನಿಂತು ಭೂತವನ್ನು ವಿಮರ್ಶಿಸುವ, ಬೆಲೆ ಕಟ್ಟುವ ಜವಾಬ್ದಾರಿಯುತ ಕೆಲಸವನ್ನು ಮಾಡಿದರು. ಅವರು ನಾಟಕಗಳು ಮತ್ತು 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯ 'ಭೂತ'ವನ್ನು ವಿಮರ್ಶಿಸುವ ಬೆಲೆ ಕಟ್ಟುವ ಕೆಲಸಕ್ಕೆ ಉತ್ತಮ ಕೊಡುಗೆಗಳು. ನಾಟಕಗಳಲ್ಲಿ ತೆಗೆದುಕೊಂಡ ವಸ್ತು ಪುರಾಣ ಅಥವಾ ಇತಿಹಾಸವಾಗಿದ್ದರೂ ಸಮಕಾಲೀನತೆಯಲ್ಲಿ ನಿಂತು ಹಾಕುವ ಪ್ರಶ್ನೆಗೆಗಳಿಂದಾಗಿ , ಪುರಾಣ ಅಥವಾ ಇತಿಹಾಸದ ಆವರಣದೊಳಗಿನ ಪ್ರಸ್ತುತ ಸಂದರ್ಭಗಳಾಗಿ ರೂಪುಗೊಳ್ಳುತ್ತವೆ. ಶಂಭುಕನಾಗಲಿ, ಸಿದ್ಧಾರ್ಥನಾಗಲಿ, ಏಕಲವ್ಯನಾಗಲಿ

ನೆಲೆಯಲ್ಲಿ ನಿಂತು, ಶಿಷ್ಟ ಪರಂಪರೆಯ ಜೊತೆಯಲ್ಲಿ ನಿಂತು ನಡೆಸಿದ ಸಂಘರ್ಷವೇ ಒಟ್ಟಾರೆ ಕುವೆಂಪು ಸಾಹಿತ್ಯ. ಕುವೆಂಪು ಅವರ ಕವನಗಳ ರೂಪ ಶಿಷ್ಟವಾಗಿ ಕಂಡರೂ ಅದರ ಅಂತರ್ಯ ಮಾತ್ರ ಸಾಂಸ್ಕೃತಿಕ ಪರಂಪರೆಯಿಂದ ಕೂಡಿರುವಂತದ್ದು. ಜಾನಪದ ಅಭಿವ್ಯಕ್ತಿಯನ್ನು ಪಡೆದಿರುವ ಬೇಂದ್ರೆ ಅವರ ಕಾವ್ಯದ ಸತ್ತ್ವ ವೈದಿಕವಾದರೆ, ಕುವೆಂಪು ಅವರ ಕಾವ್ಯದ ಸತ್ತ್ವ ವೈದಿಕವಲ್ಲದಿರುವುದು ಗಮನಾರ್ಹ. ಬೇಂದ್ರೆ ಅವರಿಗಿಂತ ಕುವೆಂಪು ಸಂಪೂರ್ಣ ಭಿನ್ನವಾಗುವುದ ಈ ಹಂತದಲ್ಲೇ. ಈ ಸಾಂಸ್ಕೃತಿಕವಾದ ಕಾರಣಗಳಿಂದಲೆ ಸಾಮಾಜಿಕವಾಗಿ ಅತ್ಯಂತ ಸ್ಫೋಟಕವಾದ ವಸ್ತುಗಳನ್ನು ಆಯ್ದುಕೊಂಡು ಕುವೆಂಪು ಕವನ ಮತ್ತು ನಾಟಕಗಳನ್ನು ಬರೆಯಲು ಸಾಧ್ಯವಾಯಿತು. ಅಲ್ಲಿಯವರೆಗೆ ಬಂದಿದ್ದ ವೈದಿಕ ಪರಂಪರೆಯ ಮೌಲ್ಯಗಳ ಅಸ್ತಿತ್ವವನ್ನೇ ನಡುಗಿಸುವಂಥ ಪ್ರಶ್ನೆಗಳನ್ನು ಕೇಳಲು ಸಾಧ್ಯವಾಯಿತು. ಶಿಷ್ಟ ಪರಂಪರೆ ಮತ್ತು ಜನಜೀವನದ ಅರಿವು -ಇವುಗಳ ಸ್ವವಿಮರ್ಶೆಯನ್ನು ಕುವೆಂಪು ತಮ್ಮ ಸಾಹಿತ್ಯ ಜೀವನದುದ್ದಕ್ಕೂ ನಡಿಸಿ ಕೊಂಡು ಬಂದರು. ಈ ಕಾರಣದಿಂದಲೇ ಕುವೆಂಪು ರೂಢಿಗತ ವ್ಯವಸ್ಥೆಯ ವಿರುದ್ಧ ಮಾತನಾಡಲು ಸಾಧ್ಯವಾಯಿತು.

ಪಾಶ್ಚಾತ್ಯ ತತ್ತ್ವಶಾಸ್ತ್ರ ಮತ್ತು ಸಾಹಿತ್ಯ ವಿಮರ್ಶೆಯನ್ನು ಆಗಾಧವಾಗಿ ಕುವೆಂಪು ಅಧ್ಯಯನ ಮಾಡಿದ್ದಾರೆ;ಅದರಿಂದ ಪ್ರಭಾವಿತರಾಗಿದ್ದಾರೆ. ಅಲ್ಲಿನ ಸಿದ್ಧಾಂತಗಳನ್ನು ಭಾರತೀಯ ವ್ಯವಸ್ಥೆಯೊಳಗೆ ತೂಗಿ ನೋಡುವ ಪ್ರಯತ್ನ ಮಾಡಿದ್ದಾರೆ. ಶ್ರೇಷ್ಠವಾದುದನ್ನು ಜೀರ್ಣಿಸಿ ಕೊಂಡಿದ್ದಾರೆ. ಆದರೆ ಎಲ್ಲಿಯೂ ಕದಿಯುವ ಕೆಲಸ ಮಾಡಿಲ್ಲ.

ಕುವೆಂಪು ಈ ಶತಮಾನ ಕಂಡ ಕನ್ನಡದ ಮಹಾಕವಿ, ಗದ್ಯಕಾರ.ಕುವೆಂಪು ಅವರನ್ನು ಅಧ್ಯಯನ ಮಾಡುವ ಕೆಲಸವೆಂದರೆ -ಒಂದು ಜನಾಂಗವನ್ನು ಅಧ್ಯಯನ ಮಾಡುವ ಕೆಲಸ. ಒಂದು ಜನಾಂಗ ಕಾಣುವ ಕನಸುಗಳೆಲ್ಲವನ್ನು ಈ ಕವಿ ಕಂಡಿದ್ದಾರೆ. ಆ ಕನಸುಗಳು ನನಸಾಗಬೇಕೆಂದು ಬಯಸಿದ್ದಾರೆ. ತಮ್ಮ ವ್ಯಕ್ತಿತ್ವ ಮತ್ತು ಸಾಹಿತ್ಯದ ಮೂಲಕ ಕೋಟ್ಯಾಂತರ ಮಂದಿ ಶೋಷಿತ ಜನರ ಅಭಿವ್ಯಕ್ತಿಯಾಗಿ ಸಾಹಿತ್ಯ ಸೃಷ್ಟಿ ಮಾಡಿದ್ದಾರೆ.



# ಪರಂಪರೆ ಸ್ವೀಕರಿಸಿ ಸಂಪ್ರದಾಯ ತಿರಸ್ಕರಿಸಿದ ಕವಿ

ಕುವೆಂಪು ಕನ್ನಡದ ಮಹಾ ಕವಿಗಳಲ್ಲಿ ಒಬ್ಬರೆಂಬುದು ನಿರ್ವಿವಾದ ವಿಷಯ. ಕನ್ನಡದ ಪ್ರಸಿದ್ಧ ವಿಮರ್ಶಕರೊಬ್ಬರ ಪ್ರಕಾರ 'ಪ್ರಪಂಚದಲ್ಲಿ ಮಹಾ ಕಾದಂಬರಿಕಾರರು ಮಹಾ ಕವಿಗಳೂ ಆಗಿರುವುದು ತುಂಬ ವಿರಳ. ಆದರೆ ಕುವೆಂಪು ಮಹಾಕವಿ ಎಂತೋ ಅಂತೆಯೆ ಮಹಾ ಕಾದಂಬರಿಕಾರರೂ ಆಗಿದ್ದಾರೆ. ಇವರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಪಡಿದಿರುವ ಸಿದ್ದಿ ಅಪೂರ್ವವಾದುದು. ಕಾವ್ಯ ಕಾದಂಬರಿ, ನಾಟಕ, ವಿಮರ್ಶೆ, ಜೀವನ ಚರಿತ್ರೆ, ಕಾವ್ಯಮೀಮಾಂಸೆ-ಇತ್ಯಾಧಿಗಳಲ್ಲಿನ, ಸಾಧನೆ ಬೆರಗುಗೊಳಿಸುವಂಥದು. ಅದೇ ರೀತಿ ಕುವೆಂಪು ತಮ್ಮ ಸಾಹಿತ್ಯದಲ್ಲಿ ಮೆರೆದಿರುವ ವೈಚಾರಿಕತೆಯನ್ನು ಗಮನಿಸಿದಾಗ ಅವರ ಪ್ರತಿಕ್ರಿಯಾಶೀಲ ಮನೋಭಾವವನ್ನು ಕಂಡುಕೊಳ್ಳಬಹುದು.

ಕನ್ನಡ ಸಾಹಿತ್ಯದ ಒಂದು ಸಾವಿರ ವರ್ಷದ ಇತಿಹಾಸದಲ್ಲಿ ಸಮಾಜದ ಕೆಳವರ್ಗದ ಪ್ರತಿನಿಧಿಯಾಗಿ ಸಾಹಿತ್ಯ ಸೃಷ್ಟಿ ಮಾಡಿದವರು ತುಂಬಾ ವಿರಳ. ೧೨ನೇ ಶತಮಾನದ ವಚನಕಾರು ಬದುಕಿನ ವಿವಿಧ ಮಜಲುಗಳಿಂದ ಬಂದು ಅಂದಿನ ಸಾಮಾಜಿಕ ವ್ಯವಸ್ಥೆಗೆ ಎಂತೋ ಅಂತೆಯೇ ಸಾಹಿತ್ಯಕ್ಕೂ ಹೊಸ ರಕ್ತದಾನ ಮಾಡಿದರು;ಹೊಸ ಆಯಾಮ ತಂದುಕೊಟ್ಟರು. ವಚನಕಾರರನ್ನು ಬಿಟ್ಟರೆ ಬೆರಳೆಣಿಕೆಗೆ ಸಿಗುವಂತೆ (ಕನಕದಾಸ, ಸರ್ವಜ್ಞ) ಕಂಡುಬರುತ್ತಾರೆ. ೨೦ನೆಯ ಶತಮಾನದಲ್ಲಿ ಕುವೆಂಪು ಕೆಳವರ್ಗದ ಪ್ರತಿನಿಧಿಯಾಗಿ ಕೆಲಸ ಮಾಡಿದವರು. ಈ ಸಾಮಾಜಿಕ ವ್ಯವಸ್ಥೆಯನ್ನು ಮತ್ತು ಆವರೆಗೆ ಬಂದಿದ್ದ ಸಾಹಿತ್ಯವನ್ನು ಹೊಸ ದೃಷ್ಟಿಕೋನದಿಂದ ನೋಡಲು ಸಹಜವಾಗೆ ಅವರಿಗೆ ಸಾಧ್ಯವಾಯಿತು. ಕುವಂಪು ಪ್ರಾರಂಭದಿಂದಲೂ ತಮ್ಮ ಸಾಹಿತ್ಯದ ಮೂಲಕ ಈ ವ್ಯವಸ್ಥೆಗೆ ಬಲವಾದ ಏಟು ಕೊಡುತ್ತಲೇ ಬಂದರು. ಪುರೋಹಿತಶಾಹಿ, ಅಧಿಕಾರಶಾಹಿಗಳನ್ನು ವಿಡಂಬಿಸುತ್ತಾ ಬಂದರು.

ಕುವೆಂಪು ಅವರಲ್ಲಿ ವಿಚಾರವಾದಕ್ಕೂ ನಾಸ್ತಿಕವಾದಕ್ಕೂ ತುಂಬ ವ್ಯತ್ಯಾಸವಿದೆ. ಅವೆರಡೂ ಬೇರೆ ಬೇರೆ. ಅವರ ಈ ನಿಲುವಿಗೆ ನಮ್ಮ ವಿಚಾರವಾದಿಗಳ ವರ್ತನೆ ಹಿನ್ನೆಲೆಯಾಗಿದೆ. ವಿಚಾರವಾದಿಗಳು ನಾಸ್ತಿಕವಾದಿಗಳೂ ಆಗಿ ತೀರಾ ರಿಜಿಡ್ ಆಗಿರುವುದು ಕಂಡುಬರುತ್ತದೆ. ನಾಸ್ತಿಕ ವಾದಿಯಲ್ಲಿ ಹೊಸ ಆಲೋಚನೆಗಳನ್ನು ಸ್ವೀಕಿರಿಸುವ ಮನೋಭಾವವಿರುವುದಿಲ್ಲ. ಆದರೆ ವಿಚಾರವಾದಿಯ ಮನಸ್ಸು ಸದಾ ಮಥಿಸುತ್ತಿರುತ್ತದೆ. ತನ್ನ ನಂಬಿಕೆ, ಧೋರಣೆಗಳನ್ನು, ಇತರರ ನಂಬಿಕೆ ಧೋರಣೆಗಳೊಡನೆ ತೂಗಿ ನೋಡುತ್ತಿರುತ್ತಾನೆ. ವಿಚಾರ ವಿನಿಮಯದಲ್ಲಿ ಸತ್ಯದ ಅನ್ವೇಷಣೆಯಿರುತ್ತದೆ. ತನ್ನದು ಸರಿಯಲ್ಲ ಎಂದು ಗೊತ್ತಾದಾಗ ನಿಜವಾದ ವಿಚಾರವಾದಿ ತನ್ನ

ತಪ್ಪನ್ನು ತಿದ್ದಿಕೊಳ್ಳುತ್ತಾನೆ; ಬೇರೆಯವರ ವಿಚಾರಗಳಿಗೆ ಮಾನ್ಯತೆ ಕೊಡುತ್ತಾನೆ. ಹೀಗಾಗಿ ವಿಚಾರವಾದಿ ಸದಾ ಬೆಳೆಯುತ್ತಿರುತ್ತಾನೆ. ಈ ಹಿನ್ನೆಲೆಯಿಂದ ವಿಚಾರವಾದಿ ನಾಸ್ತಿಕವಾದಿಗಿಂತ ಬೇರೆಯಾಗುತ್ತಾನೆ.

ಕುವೆಂಪು ಅವರಿಗೆ ಸಮಾಜದ ವಿವಿಧ ಕ್ಷೇತ್ರಗಳ ಪರಿಜ್ಞಾನ ಹೆಚ್ಚಿದೆ. ಇವರ ಕವನಗಳಲ್ಲಿ ಆಂತರ್ಮುಖತೆಯನ್ನೇ ನಾವು ಬಲವಾಗಿ ಕಂಡರೂ, ಬಹಿರ್ಮುಖತೆಯೂ ಸಾಕಷ್ಟಿದೆ. ಪ್ರಕೃತಿಯ ಆರಾಧನೆಯಲ್ಲಿ ಮುಳುಗಿ, ಮೆರೆಯುವ ಕವಿ, ಕೆಲವು ಕಡೆ ನಿಷ್ಠುರ ಸತ್ಯವನ್ನಾಡುವ ಕ್ರಾಂತಿ ಕಾರಕನಾಗಿಕಾಣುತ್ತಾರೆ. ಈ ನಿಟ್ಟಿನಲ್ಲಿ ಇವರ ವೈಚಾರಿಕತೆ ವ್ಯಕ್ತವಾಗುತ್ತದೆ. ಶೋಷಿತವರ್ಗವನ್ನು ಪ್ರತಿನಿಧಿಸುತ್ತ ದಬ್ಬಾಳಿಕೆಗೆ ಪ್ರತಿಕ್ರಿಯಿಸುವ ಮನೋಭಾವ ಇವರ ಪ್ರಾರಂಭದ ಕವನಗಳಲ್ಲಿ ಕಂಡು ಬರುತ್ತದೆ. "ಪಾಂಚಜನ್ಯ", "ಕೋಗಿಲೆ ಮತ್ತು ಸೋವಿಯೆತ್ ಪಷ್ಯಾ", "ಪ್ರೇತಕ್ಯೂ" ಸಂಕಲನಗಳ ಅನೇಕ ಕವನಗಳು ಇದಕ್ಕೆ ಒಳ್ಳೆಯ ಉದಾಹರಣೆ. ಇಲ್ಲೆಲ್ಲ ವಿಡಂಬನೆ, ವ್ಯಂಗ್ಯ, ವಿಷಾದತೆಗಳ ಮೂಲಕ ಸಮಾಜವನ್ನು ನೋಡುತ್ತಾರೆ.

ಕನ್ನಡದ ಉತ್ತಮ ಪದ್ಯಗಳಲ್ಲೊಂದಾದ "ಕಲ್ಕಿ" ಗಹನವಾದ ವೈಚಾರಿಕತೆಯನ್ನೊಳಗೊಂಡು ಮೂರ್ತಿವೆತ್ತಿದೆ. ನಮ್ಮ ಸಮಾಜದಲ್ಲಿನ ಆರ್ಥಿಕ ಅಸಮಾನತೆ, ಬಡತನ, ಶ್ರೀಮಂತಿಕೆಯ ದರ್ಪ-ಈ ಚಿತ್ರಗಳನ್ನು ಧ್ವನಿಯುಕ್ತವಾಗಿ ಈ ಕವನ ಹೇಳುತ್ತಾ ಹೋಗಿ ಕೊನೆಯಲ್ಲಿ ನೊಂದವನ ಸಹನೆಯ ಸಿಡಿತದಿಂದಾಗಿ ಲೋಕಕಂಟಕ ಶಕ್ತಿಗಳು ಸುಟ್ಟುಹೋಗುತ್ತವೆ ಎಂಬ ಆಶಾಭಾವನೆಯಲ್ಲಿ ಮುಕ್ತಾಯವಾಗುತ್ತದೆ. ಕೇವಲ ದುಡಿಮೆಯೊಂದರಿಂದ ಬದುಕಿನ ಸಾರ್ಥಕ್ಯ ಸಾಧ್ಯವಾಗುವುದಿಲ್ಲ. ಈ ಬದುಕು ವ್ಯಕ್ತಿಸ್ವಾತಂತ್ರ್ಯಕ್ಕೆ ಮತ್ತು ವ್ಯಕ್ತಿ ಪ್ರಜ್ಞೆಯ ವಿಕಾಸಕ್ಕೆ ಅನುವಾಗುವಂತಿರಬೇಕು. ಕೇವಲ ಯಾಂತ್ರಿಕ ಬದುಕಿನಿಂದ, ಆದರಿಂದ ಬರಬಹುದಾದ ಆರ್ಥಿಕ ಸವಲ್ಲತ್ತುಗಳಿಂದ ಬದುಕು ಶ್ರೀಮಂತವಾಗುವುದಿಲ್ಲ ಎಂದು "ಸೋವಿಯತ್ ರಷ್ಯಾ ಮತ್ತು ಕೋಗಿಲೆ"ಯಲ್ಲಿ ಹೇಳುತ್ತಾರೆ. ವ್ಯಕ್ತಿ ಸ್ವಾತಂತ್ರ್ಯದ ಬಗ್ಗೆ ಅವರಿಗೆ ಮಿಗಿಲಾದ ನಂಬಿಕೆಯಿರುವುದು ಇವರ ಸಾಹಿತ್ಯದಿಂದ ತಿಳಿದು ಬರುತ್ತದೆ. ಸಮತವಾದದಲ್ಲಿಯೂ ಕೂಡ ಮಾನವೀಯತೆ ಅರಳುವಂತಾಗಬೇಕೆಂಬುದು ಇವರ ವಿಚಾರ.

## 'ಮನುಜ ಮತಕ್ಕೆ ಬನ್ನಿ'

ನಮ್ಮ ಸಮಾಜದ ತಾಟಸ್ಥ್ಯಧೋರಣೆಯನ್ನು "ನಮ್ಮ ದೇಶಕ್ಕೆ ಏನು ಬಂದರೇನಂತೆ ಕೊನೆಗೆ ಕಮ್ಯೂನಿಸಂ ಬಂದರೂ;! ಹಾಕುವೆವು ಅದಕ್ಕೂ ಮೂರು ನಾಮ ! ಅದರ ಹೆಗಲಿಗೂ ಬೀಳುವುದು ಜನಿವಾರ. ಅದಕ್ಕೂ ಕಟ್ಟುವೆವು ಲಿಂಗ ! ಕ್ರಾಸುತಗಲಿಸಿದರೂ ಆಷ್ಚರ್ಯವಿಲ್ಲ"- ಹೀಗೆ ಚಿತ್ರಿಸುತ್ತಾರೆ. ನಮ್ಮ ವಿಚಾರವಿಮುಖ ವ್ಯವಸ್ಥೆಯ ಅವಿಚಾರಗಳನ್ನು ಈ ಕವನ ವಿಡಂಬಿಸುತ್ತದೆ. ಕುವೆಂಪು, ಆ ಮತ ಈ ಮತದ ಹಳೆ ಮತದ ಸಹವಾಸ ಬಿಟ್ಟು ಮನುಜ

ಮತಕ್ಕೆ ಬನ್ನಿರೆಂದು ಆಹ್ವಾನಿಸುತ್ತಾರೆ. ಇಲ್ಲಿ ಇವರ ವಿಶ್ವಪ್ರಜ್ಞೆಯ ಅರಿವಾಗುತ್ತದೆ. ಎರಡುಸಾವಿರ ವರ್ಷಗಳಿಂದ ನಮ್ಮನ್ನಾಳುತ್ತಾ ಬಂದಿರುವ ವೈದಿಕಮತ ಮಾಡಿರುವಂಥ ಅನಾಹುತಗಳಿಂದ ಈಗಲಾದರೂ ಬುದ್ಧಿ ಕಲಿಯದಿದ್ದರೆ, ನಾವು ಹಾಳಾಗುವುದು ಖಂಡಿತ ಎಂದು ಅವರು ಹೇಳುತ್ತಾರೆ.

ಕುವೆಂಪು ಅವರಿಗೆ ಜೀವನಾನುಭವ ಆಗಾಧವಾಗಿದೆ, ವಿಶಾಲವಾಗಿದೆ ಎಂಬುದು ಅವರ ಎರಡು ಕಾದಂಬರಿಗಳಿಂದ ತಿಳಿದು ಬರುತ್ತದೆ. ಮಲೆನಾಡಿನ ಜನ ಜೀವನವನ್ನು ವಿವರಣೆಯಲ್ಲಿ ಹಿಡಿದಿಟ್ಟಿರುವ, ಕಲಾತ್ಮಕ ಚೌಕಟ್ಟಿನಲ್ಲಿ ಬೆಸೆದು ಶ್ರೇಷ್ಠ ಕಲಾಕೃತಿಗಳನ್ನಾಗಿಸಿರುವ ಕುವೆಂಪು ಅವರ ಶಕ್ತಿ ಬೆರಗು ತರುತ್ತದೆ. ಅರ್ಥ ಹೀನವಾದುದನ್ನು ಬಿಟ್ಟು ಅರ್ಥಪೂರ್ಣ ವಾದುದನ್ನು ಸ್ವೀಕರಿಸಬೇಕೆಂಬ ಅವರ ಮನೋಧರ್ಮ ಕನ್ನಡದ ಸಂದರ್ಭದಲ್ಲಿ ಬಹು ಜನ ಲೇಖಕರಿಗೆ ಇಲ್ಲದಂಥದು.

ಇವರನ್ನು ಬ್ರಾಹ್ಮಣ ವಿರೋಧಿ ಎಂದು ಕರೆದವರೂ ಉಂಟು. ಅವರ ಸಾಹಿತ್ಯವನ್ನು ಓದದವರು ಹೇಳುವ ಮಾತದು. ಕುವೆಂಪು ಅವರಿಗೆ ಯಾವುದೇ ಗುಂಪು, ಪಂಥ, ಜಾತಿಗಳ ಮೇಲೆ ವೈರವಿಲ್ಲ. ಆದರೆ ಯಾವುದೇ ಗುಂಪಿನ ಅರ್ಥಹೀನ ಮೌಲ್ಯವನ್ನು ಖಂಡಿಸುತ್ತಾರೆ. ನಮ್ಮ ಸಮಾಜದ ಈ ವ್ಯವಸ್ಥೆಗೆ ಕಾರಣವಾದ, ಕಾರಣರಾದ ವ್ಯಕ್ತಿಗಳನ್ನು "ಪುರೋಹಿತ ಶಾಹಿ" ವರ್ಗವೆಂದು ಕರೆಯುತ್ತಾರೆ. ಕುವೆಂಪು ಒಕ್ಕಲಿಗರನ್ನು ಕೂಡ "ಅನ್‌ಕಲ್ಚರ್ಡ್ ಬ್ರೂಟ್ಸ್"ಎಂದು ಕರೆದಿದ್ದಾರೆ. ಕುವೆಂಪು ವಿಶಾಲ ಮನೋದರ್ಮವುಳ್ಳ ವ್ಯಕ್ತಿ. ಅವರಿಗೆ ಬೇಕಾಗಿರುವುದು ಮಾನವೀಯ ಬದುಕು;ಮನುಜ ಮತ. ಸೀಮಿತ ಧೋರಣೆ, ಕೀಳುರುಚಿಯ ನಂಬಿಕೆ, ಆಚಾರಗಳಲ್ಲಿ ಬೆಂದು ಹೋಗುತ್ತಿರುವ ನಮ್ಮ ವ್ಯವಸ್ಥೆಯನ್ನು ಈ ಕಾರಣಗಳಿಂದಲೇ ತುಂಡು ತುಂಡಾಗಿ ಖಂಡಿಸುವ ಛಾತಿಯನ್ನು ಅವರಲ್ಲಿ ಕಾಣುವುದು.

ವೈದಿಕ ವರ್ಗದ ಅಂಧ ಸಂಪ್ರದಾಯದ ಬಗ್ಗೆ, ಮಡಿಯ ಬಗ್ಗೆ, ಪುರೋಹಿತಶಾಹಿಯ ಶೋಷಣೆಯ ಬಗ್ಗೆ ಕುವೆಂಪು ತಮ್ಮ ಕಾದಂಬರಿಯಲ್ಲಿ ವಿಚಾರ ಮಾಡುತ್ತಾರೆ. "ಮಲೆಗಳಲ್ಲಿ ಮದುಮಗಳು" ಕಾದಂಬರಿಯಲ್ಲಿ ಮಂಜಭಟ್ಟರು ಮತ್ತು ದೇವಯ್ಯನವರ ಸಂಭಾಷಣೆ ಯಲ್ಲಿ ಬ್ರಾಹ್ಮಣರ ಮೇಲರಿಮೆಯನ್ನು ವಿಡಂಬಿಸುತ್ತಾರೆ. ಅದೇ ರೀತಿ "ಕಾನೂರು ಹೆಗ್ಗಡತಿ"ಯ ವೆಂಕಪ್ಪ ಜೋಯಿಸರು ಚಂದ್ರಯ್ಯ ಗೌಡರಲ್ಲಿ "ಹೂವಯ್ಯನಿಗೆ ಓದಿಸಲೇ ಬಾರದಿತ್ತು"ಎಂದು ಉಪದೇಶ ಮಾಡುವಲ್ಲಿನ ಕಿತಾಪತಿ ಬುದ್ಧಿ ಮತ್ತು ಗಟ್ಟಿ ಸ್ಥಾನಗಳನ್ನು ಶೂದ್ರರು ಆಕ್ರಮಿಸುತ್ತಾರೆ ಹಾಗೂ ತಮ್ಮ ಬಂಡವಾಳ ಅವರಿಗೆ ತಿಳಿದು ಹೋಗುವುದಲ್ಲಾ ಎಂಬ ಅವರ ಕುಟಿಲ ವ್ಯಕ್ತಿತ್ವನ್ನೂ ಬಿಚ್ಚಿ ತೋರಿಸುತ್ತಾರೆ.

ಮಲೆನಾಡಿನ ಹಳೇ ಪೈಕದವರು ಮದುವೆ, ತಿಥಿ ಮತ್ತಾವುದೇ ಸಂಪ್ರದಾಯ ಗಳಲ್ಲೂ ಒಕ್ಕಲಿಗರನ್ನು ಅನುಸರಿಸಬಾರದು ಎಂಬ ತಿಳಿವಳಿಕೆಯನ್ನು ಆ ಸುತ್ತಿನ ಗೌಡ ಹೆಗ್ಗಡೆಗಳು ಹೊಂದಿದ್ದರು ಎಂಬುದನ್ನು ಹೇಳುತ್ತಾರೆ. ಒಕ್ಕಲಿಗರನ್ನು ವಿಡಂಬಿಸುವ ಭಾಗಗಳು ಕುವೆಂಪು ಅವರು ಎರಡು ಕಾದಂಬರಿಗಳಲ್ಲೂ ಬರುತ್ತವೆ. ಈ ಪ್ರಸಂಗಳು ಕುವೆಂಪು ಕೇವಲ

ಬ್ರಾಹ್ಮಣವಿರೋಧಿಯಲ್ಲ ಎಂಬುದನ್ನು ತೋರಿಸುತ್ತವೆ. ಅದೇ ರೀತಿ ಒಕ್ಕಲಿಗರ ಮತ್ತು ಹೊಲೆಯರ ಮಧ್ಯದ ಭೇದವನ್ನು "ಮಲೆಗಳಲ್ಲಿ ಮದುಮಗಳು"ವಿನ "ಹೆಗ್ಗಡೆರ ದಿಬ್ಬ" ಚೆನ್ನಾಗಿ ಪ್ರತಿಮಿಸುತ್ತದೆ.

ಶಂಕರ ಹೆಗ್ಗಡೆಯ ಪಾತ್ರ ಕುವೆಂಪು ಅವರ ಜೀವಂತ ಸೃಷ್ಟಿ. ಈ ಪಾತ್ರ ಕೇವಲ ಮೇಲಿನ ಸ್ತರದ ಅನುಕರಣೆಯಿಂದ ತಾನೂ ವೈದಿಕನಂತಾಗಬೇಕು ಮತ್ತು ತಾನು ತೀರ ಕೀಳುಸ್ತರದಲ್ಲಿ ಜನಿಸಿದವನೆಂಬ ಕೀಳರಿಮೆಯ, ಮನುಷ್ಯತ್ವನ್ನು ಕಳೆದು ಕೊಂಡು ಜಿಗಣೆಯಂತಾಗುವ ವ್ಯಕ್ತಿತ್ವಕ್ಕೆ ಸಂಕೇತ. ಈ ಪಾತ್ರ ಡಾ. ಎಸ್. ಎಲ್. ಭೈರಪ್ಪನವರ "ದಾಟು" ಕಾದಂಬರಿಯಪಾತ್ರವೊಂದಕ್ಕೆ ಮೂಲವಾಗಿದೆ.

## ಯುಗ ಪ್ರಜ್ಞೆ

ಕುವೆಂಪು ಅವರ ನಾಟಕಗಳಲ್ಲಿ ವೈಚಾರಿಕತೆ ಬಹಳ ಚೆನ್ನಾಗಿ ಎದ್ದು ಕಾಣುತ್ತೆದೆ. ಶೂದ್ರ ತಪಸ್ವಿ, ಬೆರಳ್‌ಗೆ ಕೊರಳ್-ನಾಟಕಗಳಲ್ಲಿ ಇದನ್ನುಮೂರ್ತರೂಪದಲ್ಲಿಕಾಣಬುಹುದು. ವ್ಯಕ್ತಿಯೊಬ್ಬ ಆತ ಯಾರೇ ಆಗಿರಲಿ, ಅವನ ಹುಟ್ಟು ಯಾವುದೇ ಇರಲಿ, ಪ್ರತಿಯೊಬ್ಬನ ಬೌದ್ಧಿಕ ವಿಕಾಸ ಸಾಧ್ಯ. ಅವನು ಆಧ್ಯಾತ್ಮಿಕನಿಲುವನ್ನು ಏರಲು ಸಾಧ್ಯವೆಂಬುದನ್ನು ಅವರು ತಮ್ಮನಾಟಕಗಳಲ್ಲಿ ಪ್ರತಿಪಾದಿಸುತ್ತಾರೆ. ಜಲಗಾರನಾಗಲಿ ಶಂಬುಕನಾಗಲಿ ಏಕಲವ್ಯನಾಗಲಿ ವರ್ಣ ವ್ಯವಸ್ಥೆಯ ಉತ್ತಮೊತ್ತಮರು ಸಾಧಿಸಲಾರದ್ದನ್ನು ಸಾಧಿಸುವುದು, ಪಡೆಯಲಾದ್ದನ್ನು ಪಡೆಯುವುದು ಈ ದೃಷ್ಟಿಯಿಂದಲೇ. ಕುವೆಂಪು ಅವರು ಸರ್ವೋದಯ ತತ್ವನನ್ನು, ದರ್ಶನವನ್ನು ಧ್ವನಿಸುವುದುನ್ನು ನಾವು ಇಲ್ಲಿ ಕಾಣಬಹುದು. ಜಲಗಾರನ ಸಮಾಜಿಕ ಸ್ಥಿತಿಗತಿಗಿಂತ, ಕೃತಿಯಲ್ಲಿ ಅವನು ಬೆಳೆಯುತ್ತಾ ಹೋಗುವುದಕ್ಕಿಂತ, ಆದ ಇತರರನ್ನು ಅಳೆಯುತ್ತಾ ಹೋಗುವಲ್ಲಿನ ಕ್ರಿಯೆ; ಮತ್ತು ಅವನ ಪರಿಜ್ಞಾನ, ಏಕಲವ್ಯನ ಪೌರಾಣಿಕ ಚೌಕಟ್ಟಿನಲ್ಲಿ ಅರಳಿಕೊಳ್ಳುವ ಪ್ರಸ್ತುತ ವ್ಯವಸ್ಥೆಯ ಮೌಲ್ಯಗಳು, ವರ್ಣ ವ್ಯವಸ್ಥೆ ನಾಗರಿಕ ಸಾಂಸ್ಕೃತಿಕ ಪ್ರಜ್ಞೆಗಳು, ಬಿಟ್ಟು ಕೊಡುವ ಮತ್ತು ದಕ್ಕಿಸಿಕೊಳ್ಳುವ ಜೀವನ ಕ್ರಮಗಳು, ಇವುಗಳ ಸುತ್ತ ಹೆಣೆದು ಕೊಳ್ಳುವ ತಾಯಿ-ಮಗ, ಗುರು-ಶಿಷ್ಯರ ಸಂಬಂಧಗಳು ಓದುಗರ ಆಲೋಚನಾ ಕ್ರಮಕ್ಕೆ ಒಂದುಹೊಸ ಆಯಾಮ ತಂದು ಕೊಡುತ್ತವೆ. ಇದೇ ರೀತಿಯ ಪೌರಾಣಿಕ ಚೌಕಟ್ಟಿನಲ್ಲಿ ಹೆಣೆದುಕೊಂಡಿದ್ದರೂ, ಬ್ರಾಹ್ಮಣ-ಶೂದ್ರ ವೈಶಮ್ಯದ ದಟ್ಟ ಚಿತ್ರ (ಚರಿತ್ರೆ) ಕೊಡುವ "ಶೂದ್ರ ತಪಸ್ವಿ"ಯಲ್ಲಿ ಪುಟ್ಟಪ್ಪನವರ ಪ್ರಖರವಾದ ಯುಗಪ್ರಜ್ಞೆ ಮತ್ತು ವೈಚಾರಿಕ ನಿಲುವುಗಳು ಎದ್ದು ಕಾಣುತ್ತವೆ.

ಕುವೆಂಪು ಎಲ್ಲವನ್ನೂ ಕಳಚಿಕೊಂಡು ಕೇವಲ ಒಂದು point of view ಆಗಿ ನಿಂತು ವಸ್ತುವನ್ನು ನೋಡಬಲ್ಲರು. ಅದರ ಜೊತೆಯಲ್ಲಿ ತಮ್ಮದೇ ಆದ ವಿಶಿಷ್ಟ sense of humour ನಿಂದ ಬದುಕನ್ನು ಪರೀಕ್ಷೆಗೊಳಪಡಿಸಬಲ್ಲರು ಎಂಬುದು ಅದರ ಕಾದಂಬರಿಗಳಿಂದ

ತಿಳಿದು ಬಂದರೆ, ಅವರ ನಾಟಕಗಳಲ್ಲಿ ನಮ್ಮ ವ್ಯವಸ್ಥೆಯ ಕರಾಳ ಕೈಗಳಲ್ಲಿ ನಮ್ಮ ಬದುಕು ನರಳುವ ರೀತಿಯನ್ನು ಚಿತ್ರಿಸಿ,ಅದು ರಿಪೇರಿ ಆಗಬೇಕಾದ ಅವಶ್ಯಕತೆಯನ್ನು ಎತ್ತಿ ತೋರಿಸಿರುವುದು ಕಂಡು ಬರುತ್ತದೆ. ಬದುಕು ಹಸನಾಗಬೇಕೆಂಬ ಗಂಭೀರ ಧೋರಣೆ ಕಂಡುಬರುತ್ತದೆ.

ಕುವೆಂಪು ಕೀರ್ತಿಯನ್ನು ಹುಡುಕ ಹೊರಟು, ಬಯಸಹೊರಟು ಮಿಡುಕಾಡಿದವರಲ್ಲ. ಅದೇ ಅವರ ಬದುಕಿನಲ್ಲಿಬಂದು ಹಾಸು ಹೊಕ್ಕಾಯಿತು. ಅವರು ಕೀರ್ತಿಯನ್ನು "ಶನಿ"ಎಂದು ಕರೆದುದ್ದಾರೆ.ಈ ದೃಷ್ಟಿಯಿಂದ ನಮ್ಮ ಎಷ್ಟೋ ಜನ ಮಹತ್ವ ಸಾಹಿತಿಗಳೆನಿಸಿಕೊಂಡಿರುವವರಿಗೆ ಕುವೆಂಪು ಅವರನ್ನು ಹೋಲಿಸಲಾಗುವುದಿಲ್ಲ. ಅವರ ನಡೆ-ನುಡಿ, ಬದುಕುಬರಹಗಳಲ್ಲಿ ಏಕತೆ ಕಂಡು ಬರುತ್ತದೆ, ಪರಿಶುದ್ಧತೆ ಕಂಡು ಬರುತ್ತದೆ. ಈ ಪರಿಶುದ್ಧಬದುಕಿನ ಚೇತನ ವೈಚಾರಿಕ ನಿಲುವುಗಳು ಬಿಗಿಯಾಗಿ ನಾಟುವಂತೆಅವರ ಲೇಖನಗಳಲ್ಲಿ ವ್ಯಕ್ತವಾಗಿವೆ. ಕುವೆಂಪು ಅವರದು ಕೇವಲ ಕನ್ನಡ ಪ್ರಜ್ಞೆಯಲ್ಲ, ಭಾರತೀಯ ಪ್ರಜ್ಞೆಯಿಲ್ಲ, ವಿಶ್ವಪ್ರಜ್ಞೆ. ಆ ಮಟ್ಟದಲ್ಲಿ ಅವರು ಮಾನವರ ಐಕ್ಯವನ್ನು ಬಯಸುತ್ತಾರೆ. ಇವರು ಬರೆದ ಈ ದಶಕದ ಹೊಸ ಸಾಮಾಜಿಕ ಆಂದೋಲನ ಸಂದರ್ಭದ ಎರಡು ಅತಿ ಮಹತ್ವಪೂರ್ಣಲೇಖನಗಳು "ವಿಚಾರ ಕ್ರಾಂತಿಗೆ ಆಹ್ವಾನ "ಮತ್ತು "ಸಂಸ್ಕೃತಿ ಕಹಳೆಗೆ ನಾಂದಿ".

ಕುವೆಂಪು ಅವರಿಗೆ ಸ್ವಾತಂತ್ರ್ಯ ಕಾಲದಲ್ಲಿದ್ದ ಆಸೆ, ನಂಬಿಕೆಗಳೆಲ್ಲವೂ ಭ್ರಮನಿರಸನವಾಗುವಂತೆ ಮಾಡಿದ ಶಕ್ತಿಗಳ ಬಗ್ಗೆ ತಿರಸ್ಕಾರವಿದೆ. ಗಾಂಧೀಜಿಯ ಬಗ್ಗೆ ಬರೆಯುತ್ತ"ಆತನ ದೇಹಕ್ಕೆ ಗುಂಡಿಕ್ಕಿದವನೇನೋ ಒಬ್ಬನೇ, ಆದರೆ ತರುವಾಯ ಆತನ ಧ್ಯೇಯಕ್ಕೆ ಉರುಳಿಕ್ಕಿ ಕೊಂದವರು ಹಲವರು ಆತನ ಅನುಯಾಯಿಗಳೆ" ಎನ್ನುವ ಮಾತು ರಾಜಕಾರಣಿಗಳನ್ನು ಆತ್ಮ ಶೋಧನೆ ಮಾಡಿಕೊಳ್ಳಲು ಪ್ರೇರೆಪಿಸುತ್ತದೆ. ನಮ್ಮ ರಾಜಕೀಯಕೇವಲ ಅನುಕರಣ ಪ್ರಿಯವಾದದ್ದು; ಅದರಲ್ಲಿ ಸ್ವಂತಿಕೆಯಿಲ್ಲ ಎಂಬುದು ಅವರ ಅಭಿಪ್ರಾಯ.

**ಯುವ ಜನತೆಗೆ ಕರೆ**

ಹಳ್ಳಿನಗರಗಳಲ್ಲಿ ಅಸಮಾನತೆಯನ್ನು ಬಿತ್ತಿರುವುದನ್ನು ಪುಟ್ಟಪ್ಪ ನವರು ಖಂಡಿಸುತ್ತಾರೆ. ವಿಕೇಂದ್ರೀಕರಣದ ಪರಿಕಲ್ಪನೆ ಕೇವಲ ಕನಸಾಗಿ ಕೇಂದ್ರೀಕರಣವೇ ಹೆಚ್ಚಾಗುತ್ತಿದೆ ಎಂಬುದನ್ನೂ ಗುರುತಿಸಿ ಹಳ್ಳಿಯವರು ಶೋಷಿತರಾಗುತ್ತಿರುವುದರ ಬಗ್ಗೆ ಎಚ್ಚರಿಕೆ ನೀಡುತ್ತಾರೆ. ನಮ್ಮ ದೇಶದ ಈ ಸ್ಥಿತಿಗೆ ಕಾರಣ ಅನಕ್ಷರತೆ ಮತ್ತು ಮತ ಮೌಢ್ಯ. ರಾಜರನ್ನು ಪ್ರತ್ಯಕ್ಷದೇವರೆಂದು ನಂಬುವ, ಪುರೋಹಿತರನ್ನು ಭೂಸುರರೆಂದು ನಂಬುವ ನಮ್ಮ ಅಜ್ಞಾನ. ಈ ಎಲ್ಲ ಕಾರಣಗಳಿಂದ ನಮ್ಮ ದೇಶದಲ್ಲಿನ ಪ್ರಜಾಸತ್ತೆ ಕೇವಲ ಅಣಕ ಆಗಿದೆ ಎಂದು ದುಃಖದಿಂದ ಹೇಳುತ್ತಾರೆ.

ಚುನಾವಣೆಯಲ್ಲಿ ಜಾತಿ, ಮತ, ಹೆಂಡ, ಹಣ ಇವೇ ಓಟರುಗಳಾಗಿವೆ. ಶೋಷಣೆಯ ವಿರುದ್ಧ ಬಂಡೆದ್ದ ಜನರನ್ನು ಸದೆ ಬಡಿಯಲು ಅಧಿಕಾರ, ಪೋಲೀಸ್ ಇತ್ಯಾದಿಗಳನ್ನು ಬಳಸಿ ನಿಷ್ಕ್ರಿಯಗೊಳಿಸುತ್ತಿರುವುದನ್ನು ಕುವೆಂಪು ಖಂಡಿಸುತ್ತಾರೆ. "ನಿಜವಾದ ಪ್ರಜಾಸತ್ತೆ ಎಂದರೆ

ಅನಿರ್ಬಂಧಿತ ಇಚ್ಛಾಸ್ವಾತಂತ್ರ್ಯದಿಂದ ಪ್ರಜೆಗಳು ಆಯುವ, ಪ್ರಾಮಾಣಿಕ ವ್ಯಕ್ತಿಗಳಿಂದ ಸರ್ವರ ಅಭ್ಯುದಯಕ್ಕಾಗಿ ನಡೆಯುವ ರಾಜ್ಯಭಾರ". ಆದರೆ ಇಂದು ಅದಕ್ಕೆ ತದ್ವಿರುದ್ಧವಾಗಿದೆ. ಅದನ್ನು ಸರಿಗೊಳಿಸುವ ಜವಾಬ್ದಾರಿ ಇಂದು ಯುವ ಜನತೆಯ ಮೇಲೆ ಬಿದ್ದಿದೆ. ಆ ದಿಸೆಯಲ್ಲಿ ಆಲೋಚಿಸುವಂತೆ ಯುವ ಜನತೆಯನ್ನು ಕುವೆಂಪು ಪ್ರಚೋದಿಸುತ್ತಾರೆ.

ನಮ್ಮ ಸಮಾಜವನ್ನು ಶೋಷಿಸುತ್ತಿರುವುದು ಕೇವಲ ಹಣವಲ್ಲ; ಹಣದಿಂದ ಅಧಿಕಾರದಿಂದ ಮತ್ತರಾದ ರಾಜಕೀಯ ವ್ಯಕ್ತಿಗಳಲ್ಲ; ಅವುಗಳಲ್ಲಿ "ಮತ" ವೂ ಒಂದು ಕಾರಣವಾಗಿದೆ. ಮತ ಭ್ರಾಂತಿಯಿಂದ ಪ್ರಯೋಜನಕ್ಕಿಂತ ಹಾನಿಯೇ ಹೆಚ್ಚು. ಆದ್ದರಿಂದ ಕುವೆಂಪು ಮತೀಯವಲ್ಲದ ಆಧ್ಯಾತ್ಮದ ಕಡೆ ಜನತೆಯನ್ನು ಸೆಳೆಯುತ್ತಾರೆ. ಎಲ್ಲಿಯವರೆಗೆ ಮತ, ಮತಭ್ರಾಂತಿಗಳು ಇರುತ್ತವೋ ಅಲ್ಲಿಯವರೆಗೆ ದೇಶ ಉದ್ಧಾರವಾಗಬೇಕಾದರೆ ಶಿಕ್ಷಣದ ಸ್ವರೂಪ ಬದಲಾಗಬೇಕು; ದೇಶ ಭಾಷಾ ಶಿಕ್ಷಣ ಮಾಧ್ಯಮವಾಗಬೇಕು; ದೇಶ ಭಾಷೆ ಆಡಳಿತ ಭಾಷೆಯಾಗಬೇಕು; ಅಧಿಕಾರ ಮತ್ತು ಆಡಳಿತ ವಿಕೇಂದ್ರಿಕರಣವಾಗಬೇಕು.

## ಬ್ರಾಹ್ಮಣರನ್ನು ಬೈದರೇನು ಬಂತು?

ಅಸ್ಪೃಶ್ಯರನ್ನು ಕುರಿತು ಹೇಳುತ್ತಾರೆ: 'ಅಸ್ಪೃಶ್ಯರೆಂದು ಯಾರು ನಿಮ್ಮನ್ನು ಬಹಿಷ್ಕಾರ ಹಾಕುತ್ತಾರೋ ಅವರಿಗೆ ನೀವೇ ಅವರಿಗಿಂತ ಮೊದಲು ಬಹಿಷ್ಕಾರ ಹಾಕಿ. ಅವರನ್ನು ಉತ್ತಮರೆಂದು ಗೌರವ ಕೊಟ್ಟರೇನೆ ಅವರು ಪ್ರಬಲರಾಗಿ ನಿಮ್ಮನ್ನು ಶೋಷಣೆ ಮಾಡಲು ತೊಡಗುವುದು'. ಈ ಮಾತಗಳು ಹಿಂದುಳಿದ ವರ್ಗದಲ್ಲಿರುವ ಕೀಳರಿಮೆಯನ್ನು ಹೋಗಲಾಡಿಸಲು ಸಹಾಯಕವಾಗುತ್ತವೆ. ಈ ಕಾರಣಗಳಿಂದ ಇಂದಿನ ಬುದ್ಧಿ ಜೀವಿಗಳು, ವಿದ್ಯಾವಂತರು ಕೇವಲ ಬ್ರಾಹ್ಮಣರನ್ನು ಬಯ್ಯುವುದರಿಂದ ಏನೂ ಪ್ರಯೋಜನವಿಲ್ಲ. ಶೂದ್ರರಿಗೆ ಒಳ್ಳೆಯ ಪ್ರಜ್ಞೆ ಮೂಡಿಸಲು ಯತ್ನಿಸಬೇಕು ಎಂಬುದು ಕುವೆಂಪು ಅವರ ಕಳಕಳಿ.



# ಕಲ್ಕಿ - ಒಂದು ವಿಮರ್ಶೆ

ಕುವೆಂಪು ಭಾರತೀಯ ಸಾಮಾಜಿಕ ಅಸಮಾನತೆಯನ್ನು ಅದರಿಂದುಂಟಾಗಿರುವ ಸಾಮಾಜಿಕ ವೈಷಮ್ಯವನ್ನು ತಮ್ಮ ಸಾಹಿತ್ಯದ ಮೂಲಕ ಚಿತ್ರಿಸಿದ್ದಾರೆ. ಸಾಮಾಜಿಕ ಸ್ತರಗಳಲ್ಲಿ ಒಂದಾದ ದುಡಿಯುವ ವರ್ಗದಿಂದ ಬಂದವರಾದ್ದರಿಂದ, ದುಡಿಮೆ ಮತ್ತು ದುಡಿಯುವವನಿಗಾಗುತ್ತಿರುವ ಆರ್ಥಿಕ ಮತ್ತು ಸಾಮಾಜಿಕ ಅನ್ಯಾಯವನ್ನು ಪ್ರತಿಭಟಿಸುವ ನೈತಿಕ ಹಕ್ಕೂ ಅವರಿಗಿದೆ. ನೈತಿಕ ಜವಾಬ್ದಾರಿ ಯಾರಿಗಿರುತ್ತದೋ ಅವನು ಮಾತ್ರ ನೈತಿಕ ಹಕ್ಕನ್ನು ಚಲಾಯಿಸಬಲ್ಲವನಾಗಿರುತ್ತಾನೆ. ಈ ನೈತಿಕ ಜವಾಬ್ದಾರಿಯೆಂಬುದು ಯಾವುದೋ ಪರಂಪರಾಗತ ಮೌಲ್ಯದಿಂದ ಬಂದುದಾಗಿರದೆ ಮಾನವೀಯ ಮೌಲ್ಯಗಳ ಆಧಾರದಿಂದ ಬಂದುದಾಗಿರುತ್ತದೆ. ಕುವೆಂಪು ಈ ದೃಷ್ಟಿಯಿಂದ ರಷ್ಯಾದ ಮಹಾನ್ ಲೇಖಕರಾದ ಮಾಕ್ಸಿಂಗಾರ್ಕಿ ಮತ್ತು ದಾಸ್ತೊವಸ್ಕಿಯರನ್ನು ಹೋಲುತ್ತಾರೆ. ಎಲ್ಲಿಯವರೆಗೆ ಬಡವ-ಬಲ್ಲಿದ ಭೇದವಳಿದು ಸಮಾನತಾವಾದವೆಂಬುದು ಸಾಮಾನ್ಯ ಸೂತ್ರವಾಗುವುದಿಲ್ಲವೋ ಅಲ್ಲಿಯವರೆಗೆ ಈ ಸಾಮಾಜಿಕ ಅಸಮಾನತೆ ತೊಲಗುವುದಿಲ್ಲವೆಂದು ಕುವೆಂಪು ನಂಬಿದ್ದಾರೆ. ಶ್ರೇಷ್ಠ ಸಾಹಿತ್ಯ ಶ್ರೇಷ್ಠ ಮಾನವೀಯತೆಯನ್ನುಳ್ಳದಾಗಿರುಬೇಕು ಎಂಬುದನ್ನು ಸತ್ಯವಾಗಿಸಿದವರು ಕುವೆಂಪು.

ಶ್ರೀಮಂತರೆಲ್ಲರೂ ಒಳ್ಳೆಯವರಾಗಿರುವುದಿಲ್ಲ. ಟಾಲ್‌ಸ್ಟಾಯ್ ಅಂಥವರು ತೀರಾ ವಿರಳ. ಶ್ರೀಮಂತರೇ ಮೊದಲಿನಿಂದಲೂ ಈ ಸಾಮಾಜಿಕ ಅವ್ಯವಸ್ಥೆಗೆ ಕಾರಣವೆಂದು ಕುವೆಂಪು ಸ್ವತಃ ಮನಗಂಡು ತಮ್ಮ ಸಾಹಿತ್ಯದ ಮೂಲಕ ಅದನ್ನು ಅಭಿವ್ಯಕ್ತಿಸಿದ್ದಾರೆ. ಯಾವುದೇ ದೇಶದ, ಯಾವುದೇ ರೂಪದ ಸಮಾಜದಲ್ಲಿ ಶ್ರೀಮಂತ ವರ್ಗ ಮತ್ತು ಪುರೋಹಿತ ವರ್ಗಗಳು ಆಳುವ ಪಕ್ಷಕ್ಕೆ ಶಾಮೀಲಾಗಿ ಬಡವರ ಶೋಷಣೆ ಮಾಡಿರುವುದನ್ನು ಚರಿತ್ರೆಯಲ್ಲಿ ಕಾಣುತ್ತೇವೆ. ಚರಿತ್ರೆ ಎಂದೂ ಸತ್ಯವನ್ನೇ ಹೇಳುವುದರಿಂದ, ಕ್ರಾಂತಿ ಇತ್ಯಾದಿ ಸಾಮಾಜಿಕ ಪರಿವರ್ತನೆಗಳು ಬಡವರಿಂದ ಮಾತ್ರ ಸಾಧ್ಯವಾಗಿದೆಯೆಂಬುದನ್ನು ಅರಿತುಕೊಳ್ಳಬಹುದು. ಒಂದು ವೇಳೆ ಶ್ರೀಮಂತ ಮತ್ತು ಪುರೋಹಿತ ವರ್ಗ ಕ್ರಾಂತಿಯ ಮಾತನಾಡಿದರೂ ಅದರ ಹಿಂದೆ ಪ್ರತಿಗಾಮೀ ಶಕ್ತಿಯೊಂದು ಗುಪ್ತವಾಗಿ ಕೆಲಸ ಮಾಡುತ್ತಿರುತ್ತದೆ. ತಮ್ಮ ಯಾವುದೋ ಸ್ವಾರ್ಥದಿಂದ ಕ್ರಾಂತಿಯ ಭ್ರಮೆಯೆಬ್ಬಿಸಿ, ನಿಜವಾದ ಕ್ರಾಂತಿಯನ್ನು ಮಂಕುಗೊಳಿಸಿರುವದನ್ನೂ ರಷ್ಯಾದ ಚರಿತ್ರೆಯಲ್ಲಿ ನಾವು ಕಾಣುತ್ತೇವೆ.

ಕುವೆಂಪು ಅವರು ತಮ್ಮ ವೈಚಾರಿಕ ಕೃತಿಗಳಲ್ಲಿ, ಮಲೆನಾಡಿನ ಸಮಗ್ರ ಬದುಕನ್ನು ಜೀವಂತವಾಗಿಸಿರುವ ತಮ್ಮ ಎರಡು ಅತ್ಯುತ್ತಮ ಕಾದಂಬರಿಗಳಲ್ಲಿ, ತಮ್ಮ ನಾಟಕಗಳಲ್ಲಿ ಮತ್ತು

ಭಾವಗೀತೆಗಳಲ್ಲಿ ನೇರವಾಗಿ, ಸಾಂಕೇತಿಕವಾಗಿ, ಕಲಾತ್ಮಕವಾಗಿ ಈ ಸಾಮಾಜಿಕ ವೈಷಮ್ಯವನ್ನೂ, ಅದಕ್ಕೆ ಮೂಲ ಕಾರಣವನ್ನೂ ದಟ್ಟವಾಗಿ ಚಿತ್ರಿಸುತ್ತಾರೆ. ಆಧುನಿಕ ವಿಚಾರವಂತರು ಅದರ ವಿರುದ್ಧ ಹೇಗೆ ಸೆಟೆದು ನಿಲ್ಲಬೇಕೆಂಬುದನ್ನೂ ಸೂಚಿಸುತ್ತಾರೆ. ಜೊತೆಗೆ, ಈ ಸಾಮಾಜಿಕ ಶೋಷಣೆಯಿಂದ ಉಂಟಾಗುವ ಬಿರುಕು ಕೇವಲ ಬಿರುಕಾಗಿ ಉಳಿಯದೆ, ಮನುಷ್ಯ ಮನುಷ್ಯರ ನಡುವಿನ ಭಯಂಕರ ಬಿರುಕಾಗಿ ಸಿಡಿದು ನಿಂತು ಸಾಮಾಜಿಕ ನ್ಯಾಯ ದೊರಕಿಸಿ ಕೊಡುವ ಕಡೆಗೆ ಸಾಗುತ್ತದೆ ಎಂದು ತಿಳಿಸುತ್ತಾರೆ. ಮನುಷ್ಯ ಮನುಷ್ಯರ ನಡುವಿನ ಅಂತರ ಹೋಗಿ, ಮಾನವೀಯ ಸಂಬಂಧಗಳು ಮಧುರವಾಗಿ ವೃದ್ಧಿಗೊಳ್ಳಬೇಕೆಂದು, ಆ ಮೂಲಕ ಸಾಮಾಜಿಕ ಪ್ರಗತಿ ಸಾಧಿಸುಬಹುದೆಂದು ಕುವೆಂಪು ನಂಬಿದ್ದಾರೆ.

ಕುವೆಂಪು ಅವರ ಸಾಮಾಜಿಕ ಕವನಗಳು ಅಧ್ಯಯನ ಯೋಗ್ಯವಾದವು. ಬಡವ ಶ್ರೀಮಂತರ ಗುಣಗಳನ್ನು ಇವರ ಕವನಗಳು ಯಥಾವತ್ತಾಗಿ ಹಿಡಿದಿಟ್ಟಿವೆ. ಕುವೆಂಪು ವ್ಯಕ್ತಿಯಾಗಿ ವಸ್ತುವನ್ನು ಕಂಡು ಅನುಭವಿಸುವ ರೀತಿ, ಆ ಅನುಭವ ಕವನದ ಶಿಲ್ಪದಲ್ಲಿ ಮೈದೋರುವಾಗ ಪಡೆದು ಕೊಳ್ಳುವ ರೂಪ ಕಲಾತ್ಮಕವೂ ಹೌದು, ವಾಸ್ತವಿಕವೂ ಹೌದು. ಕವಿ ತನಗಾಗಿ ಬರೆದು ಕೊಳ್ಳುತ್ತೇನೆಂದು ಹೇಳಿಕೊಳ್ಳುವುದು ಮೂರ್ಖತನ. ಕಲೆಯ ಉದ್ದೇಶ ಅಷ್ಟು ಸೀಮಿತವಲ್ಲ. ಕಲೆಯ ಸಾರ್ಥಕತೆ ಅದರ ಪ್ರಯೋಜನದ ಮೇಲೆ ನಿಂತಿದೆ. ಕುವೆಂಪು ಕವನವನ್ನೂ 'ಸಾಮಾಜಿಕ'ರಿಗಾಗಿ ಬರೆದವರು. ಕಲೆ ಮಾನವ ಬದುಕಿನ ವಿಕಾಸದ ಮಜಲಿನ ಮಹತ್ವ ಸಾಧನವಾಗಬೇಕೆಂದು ಒತ್ತಿ ಹೇಳಿದವರು. ಕವಿಯ ಅನುಭವವು ಎಲ್ಲರ ಅನುಭವವಾಗಬೇಕಾದರೆ, ಆ ಅನುಭವದ ಅಭಿವ್ಯಕ್ತಿಯಲ್ಲಿ ಕವಿ ಬಹಳ ಎಚ್ಚರವಹಿಸಬೇಕಾಗುತ್ತದೆ. ಮುಂದಿನದು ಸಹೃದಯನಿಗೆ ಸೇರಿದ್ದು.

ಮೇಲಿನ ಅಂಶಗಳ ದೃಷ್ಟಿಯಿಂದ ಕುವೆಂಪು ಅವರ 'ಕಲ್ಕಿ' ಕವನವನ್ನು ವಿಶ್ಲೇಷಣೆ ನಡೆಸಬಹುದು.

---

1. ಅದು ಒಂದು ಅಮೂರ್ತ ವಸ್ತು, ಅದು ಹಾಕಿಕೊಂಡಿರುವ ವೇಷದಿಂದ ತುಂಬ ಸಾಧು ಮತ್ತು ಪೂಜ್ಯ ಎಂಬಂತೆ ತೋರುತ್ತದೆ. ಅಧು ಭಾವರೂಪಿಯಾದುದರಿಂದ ಅತಿ ಸೂಕ್ಷ್ಮವಾಗಿ ಹೃದಯ ಪ್ರವೇಶ ಮಾಡಿ ನಮ್ಮನ್ನೂ ಆಶ್ರಯಿಸುತ್ತದೆ. ಮತ್ತು ನಮ್ಮಲ್ಲಿ ನಿಜವಾಗಿಯೂ ಇರುವ ಒಂದು ಅನಿರ್ವಚನೀಯ ಅತ್ಯಂತ ಅಂತರತಮ ಸತ್ಯಸ್ಸ ಸತ್ಯವಾದ ಸನಾತನ ತತ್ತ್ವಕ್ಕೆ (ಅದನ್ನು ಆಧ್ಯಾತ್ಮ ಎಂದು ಹೆಸರಿಸುತ್ತೇವೆ.)ಅದು ತನ್ನ ಬಾಂಧವ್ಯವನ್ನೂ ಘೋಷಿಸುತ್ತಾ ಬಂದಿರುವುದರಿಂದಲೂ ಮತ್ತು ಅದನ್ನೆ ತಾನು ಪೋಷಿಸುತ್ತಿರುವುದಾಗಿ ಹೇಳುತ್ತಲೂ ಇರುವುದರಿಂದಲೂ ಅದರ ಪ್ರಚ್ಛನ್ನ ವಂಚನೆಯ ಮುಷ್ಟಿಯಿಂದ ತಪ್ಪಿಸಿಕೊಳ್ಳುವುದು ಕಷ್ಟ ಸಾಧ್ಯವಾಗಿದೆ. ಅದರ ಹೆಸರು 'ಮತ !' ಈ ಮತ ಭ್ರಾಂತಿಯಿಂದ ಲೋಕಕಕವ ಆಗಿರುವಷ್ಟು ಹಾನಿ ಮತ್ತಾವುದರಿಂದಲೂ ಆಗಿಲ್ಲ ಎಂದು ತೋರುತ್ತದೆ. ಇನ್ನೂ ಮುಂದೆಯಾದರೂ ನೀವು ಆಧ್ಯಾತ್ಮವನ್ನು ಉಳಿಸಿಕೊಂಡು ಮತ ಮತ್ತು ಅದರ ಜನ್ಯಾವಾದ ಮತ ಭ್ರಾಂತಿ ಮತ್ತು ಮೌಢ್ಯವನ್ನು ನಿರಾಕರಿಸದಿದ್ದರೆ ನಿಜವಾದ ಪ್ರಜಾಸತ್ತೆಯಾಗಲಿ ಸಮಾಜವಾದವಾಗಲಿ ಸಮಾನತಾ ಭಾವ ಸ್ಥಾಪನೆಯಾಗಲಿ ಎಂದೆಂದಿಗೂ ಸಾಧ್ಯವಾಗುವುದಿಲ್ಲ. ವಿಚಾರ ಕ್ರಾಂತಿಗೆ ಆಹ್ವಾನ, ಪುಟ ೭ (ಮೊ ಮು. ೧೯೭೬)

ಕಲ್ಕಿ ಒಂದು ಪೌರಾಣಿಕ ಕಲ್ಪನೆ. ಈ ಹೆಸರನ್ನೇ ಕುವೆಂಪು ಕವನದ ಶೀರ್ಷಿಕೆಯನ್ನಾಗಿ ಕೊಟ್ಟಿರುವುದರಿಂದ, ಕುವೆಂಪು ಅವರ ನಂಬಿಕೆಯ ಮೇಲೆ ಆಲೋಚಿಸಬಹುದು. ಮೂಲತಃ ಕುವೆಂಪು ಮತೀಯತೆಯನ್ನು ತಿರಸ್ಕರಿಸಿದರೂ ಅಧ್ಯಾತ್ಮವನ್ನು ಒಪ್ಪಿಕೊಳ್ಳುತ್ತಾರೆ.[1] ಮಣ್ಣಿನಿಂದ ಚಿನ್ನ ಸೋಸುವ ಕೆಲಸ ಅವರದು. ಹಳೆಯದರಲ್ಲಿ ಗಟ್ಟಿಯಾದುದನ್ನು ಉಳಿಸಿಕೊಳ್ಳಲು ಯತ್ನಿಸುತ್ತಾರೆ. ಹಳೆಯ ಗಟ್ಟಿ ಮೌಲ್ಯದ ಮೇಲೆ ಹೊಸ ತತ್ವ ಅರಳಬೇಕಾಗುತ್ತದೆಯೆಂದು ಕುವೆಂಪು ಪ್ರತಿಪಾದಿಸುತ್ತಾರೆ. ಅಂದ ಮಾತ್ರಕ್ಕೆ ಹಳೆಯ ಮೌಢ್ಯ, ಕಂದಾಚಾರಗಳನ್ನು ಒಪ್ಪಿಕೊಳ್ಳುತ್ತಾರೆಂದು ಇದರರ್ಥವಲ್ಲ. ಕಲ್ಕಿ ಕವನದಲ್ಲೇ ಅದನ್ನೆಲ್ಲ ಅಲ್ಲಗಳೆದಿದ್ದಾರೆ.

ಶ್ರೀ ಕೃಷ್ಣ, ತ್ರಿಮೂರ್ತಿ ಕಲ್ಪನೆಯಲ್ಲಿ ರಕ್ಷಕ. ಯಾವಾಗ ಲೋಕದಲ್ಲಿ ಅಧರ್ಮ ಅನ್ಯೆತಿಕತೆ, ಅಸಮಾನತೆ ಹೆಚ್ಚುತ್ತದೆಯೋ ಆಗ ಶ್ರೀ ಕೃಷ್ಣ ಅವತಾರ ಮಾಡಿ ಧರ್ಮದ ಉದ್ಧಾರ ಮಾಡುತ್ತಾನೆಂಬುದು ಭಾರತೀಯ ಕಲ್ಪನೆ; ಧಾರ್ಮಿಕ ನಂಬಿಕೆ. ದ್ವಾಪರಯುಗ ಮುಗಿದ ನಂತರ ಕಲಿಯುಗ ಬರುತ್ತದೆಯೆಂದು ಪುರಾಣ ಹೇಳುತ್ತದೆ. ಕಲಿಯ ಅವತಾರ ಇನ್ನೂ ಆಗಿಲ್ಲವೆಂದು ಜನರ ನಂಬಿಕೆ. ಮುಂದೆ ಆಗುತದೆಯೆಂದು ಧಾರ್ಮಿಕ ಶ್ರದ್ಧೆಯ ಜನ ಹೇಳುತ್ತಾರೆ. ಆದರೆ ಕುವೆಂಪು ಅವರ ಕಲ್ಕಿಯ ಕಲ್ಪನೆ ಅಭೂತಪೂರ್ವವಾಗಿದೆ. ಕಲ್ಕಿಯೆಂಬ ಹೆಸರು ಮಾತ್ರ ಪೌರಾಣಿಕವಾಗಿದೆಯೇ ಹೊರತು, ಅವನ ಪಾತ್ರ ಸಕಾಲಿಕ ಜೀವನದ ಅನಿವಾರ್ಯತೆಯ ಉದ್ಭವವಾಗಿದ್ದು ಭವಿಷ್ಯತ್ತನ್ನೂ ವ್ಯಾಪಿಸಿ ನಿಂತುಕೊಳ್ಳುತ್ತದೆ. ಇಲ್ಲಿ ಕಲ್ಕಿ ಕೇವಲ ಸಾಂಕೇತಿಕ ವ್ಯಕ್ತಿ. ಸಾಮಾಜಿಕ ಅಸಮಾನತೆಯನ್ನು ತೊತ್ತಳ ತುಳಿಯಲು ಬಡವರೆದೆಯಿಂದ, ಬಡವರೆದೆಯ ನೋವಿನ ನರಳಿಕೆಯ ಅನಿವಾರ್ಯ ಸಿಡಿತದಿಂದ ಉದ್ಭವಿಸಿದ ಮಾರಿಶಕ್ತಿ. ಕುವೆಂಪು ಅವರಲ್ಲಿ ಈ ಅಪೂರ್ವ ತಿರುವು ಕಲ್ಕ್ಯಾವತಾರಕ್ಕೆ ಬರುವುದರಿಂದ,ಕಲ್ಕಿ ಕೇವಲ ಪೌರಾಣಿಕ ವ್ಯಕ್ತಿಯಾಗದೆ, ದುಡಿಯುವ ವರ್ಗಕ್ಕೆ ಪ್ರತಿಮೆಯಾಗಿ, ಅವರ ಶಕ್ತಿಗೆ ಅಭಿವ್ಯಕ್ತಿಯ ರೂಪವಾಗುತ್ತಾನೆ. ಹೀಗೆ ಕುವೆಂಪು ಪೌರಾಣಿಕ ಕಲ್ಪನೆಯೊಂದನ್ನು ಆಯ್ದುಕೊಂಡರೂ "ಅದರ ಸಂದರ್ಭದಿಂದಲೇ ಸಮಕಾಲೀನವೂ ಸಾರ್ವಕಾಲೀನವೂ ಆದ ವೈಚಾರಿಕ ಅರ್ಥವನ್ನು ಹೊರಡಿಸ್ತು[2]" ತ್ತಾರೆ. ಕುವೆಂಪು ಇಲ್ಲಿ ಕಲ್ಕಿಯ ಕಥೆ ಎಲ್ಲೂ ಹೇಳುವುದಿಲ್ಲ. ಅವನ ಹೆಸರನ್ನು ಬಳಸಿಕೊಂಡು ವಸ್ತುವಿಗೆ ತಂದು ಕೊಡುವ ಅದ್ಭುತ ಪರಿಣಾಮದಿಂದಾಗಿ ಕವನ ಓದುಗರಲ್ಲಿ ಸದಾ ಹಸಿಯಾಗಿ ಉಳಿಯುವಂತೆ ಮಾಡುತ್ತಾರೆ.

ಸಾಹಿತ್ಯಕವಾಗಿಯೂ ಕುವೆಂಪು ಅವರ ಅತ್ಯುತ್ತಮ ಪದ್ಯಗಳಲ್ಲಿ ಒಂದಾಗಿ ಕಲ್ಕಿ ನಿಲ್ಲುತ್ತದೆ. ಕವಿ ಇಲ್ಲಿ ಬಳಸಿಕೊಂಡಿರುವ ತಂತ್ರ ಸಾಂಕೇತಿಕವಲ್ಲ; ನೇರ. ವಸ್ತುವನ್ನು ಸರಳವಾಗಿ ನಿರೂಪಿಸಿ ಕೊಂಡು ಸಾಗುತ್ತಾರೆ. ಎಲ್ಲಿಯೂ ಆವೇಶದ ಅಂಶವಿಲ್ಲ. ಸಂಯಮದ ಬರವಣಿಗೆಯನ್ನು ಗುರುತಿಸ ಬಹುದು. ವಸ್ತುವಿನ ಬಗ್ಗೆ, ಸಂಪೂರ್ಣ ಅರಿವಿರುವುದರಿಂದ ಓದುಗನಿಗೆ ಮೈ ನವಿರೇಳುವಂಥ

---

2. ರಾಗೌ - ಚೆರಳ್‌ಗೆ ಕೊರಳ್ : ಒಂದು ಅಧ್ಯಯನ, ಪುಟ ೨೯. ಕಾಮಳ್ಳಿ, ಪುವೆಂಪು ಹುಟ್ಟು ಹಬ್ಬದ ನೆನಪಿನ ಸಂಚಿಕೆ. ೧೯೭೬

ಅನುಭವವನ್ನು ಕವನ ತಂದುಕೊಡುತ್ತದೆ. ಕವನ ತನ್ನ ಪ್ರತಿಸಾಲಿನಲ್ಲೂ ವ್ಯಕ್ತಪಡಿಸುವ ವೈಚಾರಿತೆಯಿಂದಾಗಿ ಹೆಚ್ಚು ವಾಸ್ತವವಾಗಿ ಗಮನ ಸೆಳೆಯುತ್ತದೆ. ಆದರೆ ಈ ವೈಚಾರಿಕತೆಯನ್ನು ಓದುಗನಿಗೆ ಮುಟ್ಟಿಸುವಾಗ ಕವನ ಎಲ್ಲೂ ಶುಷ್ಕವಾಗುವುದಿಲ್ಲ. ಕವನದ ಭಾವಗೀತಾತ್ಮಕ ಅಂಶ ವಸ್ತುವನ್ನು ಜೀವಂತವಾಗಿಯೂ, ತೀವ್ರತರವಾಗಿಯೂ ಇಟ್ಟಿದೆ. ನವೋದಯ ಕವಿಗಳಿಗಿರುವ ಈ ಸಾಮಾಜಿಕ ತುರ್ತು ಇಲ್ಲಿ ಗಮನಿಸಬೇಕಾದ ಅಂಶ. ಸಾಮಾಜಿಕ ತುರ್ತಿರುವ ಕವಿ ತನ್ನ ಸಾಹಿತ್ಯದ ಸಂವಹನ ಕ್ರಿಯೆಯ ಬಗ್ಗೆ ನಿಗ ವಹಿಸುತ್ತಾನೆ. ಕೆಲಸಕ್ಕೆ ಬಾರದ ತಾಂತ್ರಿಕತೆಯಿಂದ ಕಾವ್ಯವನ್ನು ಜಟಿಲಗೊಳಿಸುವುದು ಒಳ್ಳೆಯದಲ್ಲ. ಆಗ ಸಾಹಿತ್ಯ ಮತ್ತು ಸಹೃದಯರ ಮುಂದೆ ಅತಿಯಾದ ದೂರ ಕಲ್ಪಿತವಾಗಿ, ಮತ್ತೆ ಸಾಹಿತ್ಯ 'ಟೀಕಾಕಾರರ' ಸ್ವತ್ತಾಗುತ್ತದೆ. ಕುವೆಂಪು ಸಮಸ್ಯೆಯನ್ನು ಅಥವಾ ವಸ್ತುವನ್ನು ಓದುಗರೊಂದಿಗೆ ಹಂಚಿಕೊಂಡು ಸಂವಾದ ನಡೆಸುವುದನ್ನು ಅವರ ಕೃತಿಗಳಲ್ಲಿ ಕಾಣಬಹುದು. ಭಾವಗೀತೆಯಂಥ ವೈಯಕ್ತಿಕಾನುಭವದ ಅಭಿವ್ಯಕ್ತಿ ಮಾಧ್ಯಮ ವನ್ನು ಕೂಡ ಕುವೆಂಪು ಸಾರ್ವತ್ರಿಕಗೊಳಿಸುವುದು ಆಶ್ಚರ್ಯ ತರುತ್ತದೆ. ಸಾಹಿತ್ಯ ಮಾಧ್ಯಮ ಕುವೆಂಪು ಅವರಲ್ಲಿ ಪಡೆದುಕೊಂಡಿರುವ ಸಫಲತೆ, ಅದರ ಸಾರ್ಥಕತೆಯನ್ನು ಸೂಚಿಸುತ್ತದೆ. ಕಲ್ಕಿಯಲ್ಲಿ ನಾವು ಮೇಲಿನ ಅಂಶಗಳನ್ನು ಸ್ಪಷ್ಟವಾಗಿ ಗುರುತಿಸಬಹುದು.

ಕಲ್ಕಿ ೧೯೩೦ರಲ್ಲಿ ರಚಿತವಾದ ಕವನ. ಐದೂವರೆ ಪುಟಗಳಷ್ಟು ದೀರ್ಘವಾಗಿದೆ. ಕವನದ ಪ್ರಾರಂಭದಲ್ಲಿ, ಕವಿ ನಿದ್ದೆ ಮಾಡುತ್ತಿರುತ್ತಾನೆ. ಆತನಿಗೊಂದು ಕನಸು ಬೀಳುತ್ತದೆ. ಆ 'ಕನಸಿನ ಬೀದಿಯಲ್ಲಿ ಆತ ನಡೆಯುತ್ತಿರುವಾಗ ದಾರಿ ತಪ್ಪುತ್ತದೆ. ಮುಂದೆ ಒಂದು ಕಾಡು, ಅಲ್ಲಿ 'ಹೆಮ್ಮರಗಳು' 'ಮುಳ್ಳಿನ ಪೊದೆಗಳು' 'ಗರಗಸವಳ್ಳಿ' 'ಪಾಪಾಸುಕಳ್ಳಿಗಳು' ತುಂಬಿವೆ. ಎಲ್ಲೆಲ್ಲಿಯೂ ಕತ್ತಲು ಆವರಿಸಿದೆ. 'ಭೀತಿಯ ಛಾಯೆ' ಸುಳಿದಾಡುತ್ತಿದೆ. ಸುತ್ತಲೂ 'ಶ್ಮಶಾನ ಮೌನ'. ಕಾಡನ್ನು ದಾಟಿ ಸಿಕ್ಕ ಬೆಟ್ಟದ ತುದಿಯನ್ನು ಹತ್ತಿ ನಿಲ್ಲುತ್ತಾನೆ. ದೂರದಲ್ಲಿ ಯಾವುದೋ ಊರು ಕಾಣಿಸುತ್ತದೆ. ಅಲ್ಲಿ ಒಂದು ಕಡೆ ಧನಿಕರ ಮನೆಗಳು ಮತ್ತೊಂದು ಕಡೆ ಬಡವರ ಗುಡಿಸಲುಗಳು. ಒಬ್ಬರಿಗೆ ಬಟ್ಟೆಯಿದ್ದರೆ, ಮತ್ತೊಬ್ಬರಿಗೆ ಮಾನಮುಚ್ಚಲು ಏನೂ ಇಲ್ಲ. ಶ್ರೀಮಂತರು ಕೂಳನ್ನು ತಿಂದು ತೇಗಿ ಎಸೆಯುತ್ತಿದ್ದರೆ ಬಡವರು ಹೊಟ್ಟೆಗಿಲ್ಲದೆ ನರಳುತ್ತಿದ್ದಾರೆ.

ಕವಿ ಇದನ್ನು ನೋಡುತ್ತ ನೋಡುತ್ತ ಕೂಡಲೆ 'ಬೆಚ್ಚಿ' ಬೀಳುತ್ತಾರೆ. ಬಡವರ ಜಠರಾಗ್ನಿ ಎದ್ದು ಎಲ್ಲವನ್ನು ಆವರಿಸಿಕೊಳ್ಳುತ್ತದೆ. ಶ್ರೀಮಂತರನ್ನು ಶ್ರೀಮಂತರ ಸೌಧಗಳನ್ನು ಬಾಚಿ ಅಗ್ನಿನುಂಗುತ್ತದೆ. ಹತ್ತಿ ಉರಿಯುವ ಆ ಊರಿನ ಬೆಂಕಿಯ ಜ್ವಾಲೆಯು ಕವಿಯನ್ನೂ ತಟ್ಟುತ್ತದೆ. ಎಲ್ಲೆಲ್ಲೂ ಜನರ ಚೀತ್ಕಾರ. ಬಡವರ ನೋವು ದಹಿಸಿ ಬೆಂಕಿಯಾಗಿ ಶ್ರೀಮಂತರನ್ನೂ ಮತ ಮೌಢ್ಯವನ್ನು ಪ್ರಸಾರ ಮಾಡುವ 'ಕಾವಿ' ಜನರನ್ನು ತಿನ್ನತೊಡಗುತ್ತದೆ. ಆಗ ಕವಿಗೆ ಬಡವನೇ ಕಲಿಯುದಂತ್ಯದ ಕಲ್ಕಿಯಾಗಿ ತೋರುತ್ತಾನೆ.

ಕೂಡಲೇ ಬೆಂಕಿಯ ದೃಶ್ಯ ಕಣ್ಮರೆಯಾಗುತ್ತದೆ. ಕವಿಗೆ ಎಲ್ಲೆಲ್ಲೂ ರಕ್ತದ ಜಲಪಾತವೇ

ಕಂಡು ಬರುತ್ತದೆ. ರುಂಡ ಮುಂಡಗಳು ಆಲಿಕಲ್ಲುಗಳಂತೆ ಹಾರುತ್ತಿರುವುದು ಗೋಚರಿಸುತ್ತದೆ. ಅಂಥ ಭಯಂಕರ ದೃಶ್ಯದಿಂದ 'ಅಸ್ಥಿಪಂಜರದಶ್ವವನೇರಿ' ಕಲ್ಕಿಯು ಪ್ರತ್ಯಕ್ಷನಾಗುತ್ತಾನೆ. "ಹಸಿವೇ! ದಾಹಾ!" ರಕ್ತಾ! ರಕ್ತಾ! ರಕ್ತಾ!" ಎಂದು ರಕ್ತದ ಹೊಳೆಯಲ್ಲಿ ಧುಮುಕಿ, ರಕ್ತವನ್ನು ಕುಡಿಯತೊಡಗಿದನು. ಎಷ್ಟು ರಕ್ತ ಕುಡಿದರೂ, ಎಷ್ಟು ಹೆಣಗಳನ್ನೂ ತಿಂದರೂ ಕಲ್ಕಿಯ ದಾಹ ಹಿಂಗುವುದಿಲ್ಲ. ಆ ದಾಹ 'ಬಡವರ ಗಂಟಲ ಬೇಗೆಯ ದಾಹ'ದಂತೆ ಕವಿಗೆ ತೋರುತ್ತದೆ. ಬೆಟ್ಟದ ಮೇಲೆ ನಿಂತಿದ್ದ ಕವಿಯನ್ನು ಕಲ್ಕಿ ಗಮನಿಸಿ, ಕವಿಯ ಕಡೆ ನಡೆಯುತ್ತಾನೆ. ಕವಿಗೆ ಹೆದರಿಕೆಯಾಗುತ್ತದೆ. "ಕಲ್ಕೀ! ಕಲ್ಕೀ" ಎನ್ನುತ ಚೀರಿದಾಗ ಕವಿಗೆ ಕನಸೊಡೆಯುತ್ತದೆ. ಕವಿಗೆ ಮತ್ತೆ ನಿದ್ರೆ ಬರುವುದಿಲ್ಲ. ಕವನ ಮುಗಿದರೂ ಕವನದಿಂದುಂಟಾದ ಪರಿಣಾಮದ ಅಲೆಗಳು ಓದುಗನಲ್ಲಿ ಮೊರೆಯುತ್ತಿರುತ್ತವೆ; ಈ ಮೊರೆತ ನಮ್ಮ ಸಾಮಾಜಿಕ ವಿಷಮತೆಯ ಮೊರೆತವಾಗಿ ಓದುಗನನ್ನು ಕಾಡುತ್ತದೆ.

ಕವನ ಪ್ರಾರಂಭವಾಗುವುದು, ಕವಿ ಕನಸನ್ನು ಕಾಣುವ ಹಂತದಿಂದ, ಕೊನೆಯಾಗುವುದು, ಕನಸು ಮುಗಿದ ನಂತರ. ಅಂದರೆ ಇಡೀ ಕವನ ಕನಸಿನಲ್ಲಿ ಕಂಡದ್ದು, ಕಂಡು ಅಭಿವ್ಯಕ್ತಿಸಿದ್ದು ಎಂದಾಯಿತು. ಕನಸು ಸತ್ಯವಲ್ಲ, ಸತ್ಯದಂತೆ ತೋರುವ ಮಿಥ್ಯವೆಂದು ನಾವು ಒಪ್ಪಿಕೊಂಡರೆ ಕವನದ ಬೆಲೆ ನಮಗೆ ಅರ್ಥವಾಗುವುದಿಲ್ಲ. ಕನಸನ್ನು ನಾವು ಪ್ರತಿಮಾ ದೃಷ್ಟಿಯಿಂದ ನೋಡಬೇಕು. ಹೀಗಾಗಿ ಇಡೀ ಕವನವೇ ಪ್ರತಿಮೆಯಾಗಿ ನಿಲ್ಲುತ್ತದೆ. ಕವಿ ಬಳಸಿಕೊಂಡಿರುವ ಈ ತಂತ್ರ ವಸ್ತುವನ್ನು ಸಂಯಮದಿಂದ ಮತ್ತು ಜವಾಬ್ದಾರಿಯಿಂದ ನೋಡಲು ಅವಕಾಶ ಮಾಡಿಕೊಟ್ಟಿದೆ.

ಕವಿ ಕನಸು ಕಾಣುತ್ತಿರುವಿಕೆ ಮತ್ತೊಂದು ಅರ್ಥದಲ್ಲೂ ಸಾಂಕೇತಿಕವಾಗಿ ತೋರುತ್ತದೆ.

---

3. ಕಲೆಯಲ್ಲಿ ಸತ್ಯ ಮೈದೋರುವುದು ಬಹು ಮಟ್ಟಿಗೆ ಪ್ರತಿಮಾ ವಿಧಾನದಿಂದಲ್ಲದೆ ಪ್ರತಿಕೃತಿ ವಿಧಾನದಿಂದಲ್ಲ.

ಸ್ವಪ್ನ ಸತ್ತೆಯಲ್ಲಿ ಪ್ರತಿಮಾವಿಧಾನದ ಈ ಸೃಷ್ಟಿ ಎಲ್ಲರ ಅನುಭವಕ್ಕೂ ಬಂದಿರುವುದರಿಂದ ಅದನ್ನು ನಿದರ್ಶನವಾಗಿ ತೆಗೆದುಕೊಂಡರೆ ಮೇಲೆ ಹೇಳಿದ ವಿಚಾರವು ಇನ್ನೂ ಸ್ಪಷ್ಟತರವಾಗುತ್ತದೆ; ಜಾಗ್ರದವಸ್ಥೆಯ ಅನುಭವ ಸಾಮಾಗ್ರಿಯ ಆಧಾರದ ಮೇಲೆಯೇ ನಿಂತಿರುತ್ತದೆ. ಸ್ವಪ್ನಾವಸ್ಥೆಯ ಸಕಲ ಸೃಷ್ಟಿ. ಕನಸಿನ ವಸ್ತುಗಳು ಎಷ್ಟು ವಿಚಿತ್ರಗಳಾಗಿರಲಿ, ಎಷ್ಟು ಅತಿ ಲೌಕಿಕಗಳಾಗಿರಲಿ, ಮತ್ತೆಷ್ಟು ಅಸ್ವಾಭಾವಿಕವಾಗಿ ತೋರಲಿ ಅವೆಲ್ಲಕ್ಕೂ ಎಚ್ಚರದ ಜಗತ್ತಿನ ಅನುಭವಗಳೇ ಮೂಲ ಸಾಮಾಗ್ರಿ.......... ಜಾಗ್ರದವಸ್ಥೆಯ ಅನುಭವಕ್ಕೆ ಸಾಂಕೇತಿಕ ಪ್ರತಿಯನ್ನು ನಿರ್ಮಿಸಿದರೆ ಆಗ ಆ ಸೃಷ್ಟಿ ಪ್ರತಿಮೆಯಾಗುತ್ತದೆ. ಸ್ವಪ್ನಸತ್ತೆಯ ಪ್ರತಿಮೆಯ ಸತ್ಯತೆ ಇರುವುದು ಅದರ ಹೊರ ಮೈಯಲ್ಲಲ್ಲ; ಅದಕ್ಕೆ ಕಾರಣವಾದ ಅನುಭವದಲ್ಲಿ, ಆ ಅನುಭವ ಕನಸಿಗೂ ಎಚ್ಚರಿಗೂ ಎರಡಕ್ಕೂ ಸತ್ಯ. ಆ ಅನುಭವದ ದೃಷ್ಟಿಗೆ ಎಚ್ಚರು ಕನಸುಗಳೆರಡೂ ಸಮಪ್ರಮಾಣದ ಸತ್ಯಗಳು.

ತಪೋನಂದನ, ಪುಟ ೨೬, ೩೦ (ಎರಡನೆಯ ಮುದ್ರಣ ೧೯೫೫)

ಕವಿ ಸಮಾಜ ಜೀವಿ, ಜವಾಬ್ದಾರಿ ಇರುವ ಸಮಾಜ ಜೀವಿ. ಆತ ಇಲ್ಲಿಯವರೆಗೆ ಸಾಮಾಜಿಕ ಅಸಮಾನತೆಯನ್ನು ಗಮನಿಸದೆ ಕುರುಡನಂತೆ ತೆಪ್ಪಗಿದ್ದ. ಕೆಲಸಕ್ಕೆ ಬಾರದನ್ನು ಕಲ್ಪಿಸಿಕೊಂಡು ಕನಸು ಕಾಣುತ್ತಿದ್ದನು. ಈಗ ಕವಿಗೆ ನಿಜವಾದುದರ ಕಡೆ ನಿಗ ಹರಿದಿದೆ; ಸತ್ಯ ಗೋಚರಿಸಿದೆ. ತನ್ನ ಕನಸು ತೊರೆದು ಸಮಾಜಿಕ ವಿಷಮತೆಯ ವಿರುದ್ಧ ಪ್ರತಿಭಟಿಸಲು ಉದ್ಯುಕ್ತನಾಗಬೇಕಾಗಿದೆ. ಅವನು ಅರಿವಿನಿಂದ ಕವಿ ಕ್ರಿಯಾಶೀಲನಾಗುತ್ತಾನೆ ಎಂಬ ನಂಬಿಕೆಯನ್ನು ತಳೆದಿರುವುದು ವ್ಯಕ್ತವಾಗುತ್ತದೆ.

ನಿದ್ದೆಯ ಲೋಕದಿ ಕನಸಿನ ಬೀದಿ,
ತಿರುಗಿದೆ, ತೊಳಲಿದೆ, ತಪ್ಪಿತು ಹಾದಿ !
ಮುಂದೆ ಕಾಣಿಸಿತೊಂದು ಅರಣ್ಯ,
ಅನಂತವಾದುದು ವನ ವಿಸ್ತೀರ್ಣ.

ಕವನ ಪ್ರಾರಂಭವಾಗುವುದು ಮೇಲಿನ ಸಾಲಿಗಳಿಂದ, 'ನಿದ್ದೆಯ ಲೋಕ' ಎಂಬ ಮಾತು ಕವಿಯ ಸ್ಥಿತಿಯನ್ನು ತೋರುವುದರ ಜೊತೆಗೆ, ಈ ಲೋಕವೆಂಬುದು ನಿದ್ದೆಯಲ್ಲಿದೆ ಎಂಬ ಮತ್ತೊಂದು ಅರ್ಥವನ್ನು ಧ್ವನಿಸುತ್ತದೆ. ಕವನ ಮುಂದೆ ಹೇಳಲಿರುವ ಸಾಮಾಜಿಕ ಅಸಮಾನತೆಯು ಈ ಲೋಕಕ್ಕೆ ತಿಳಿದಿಲ್ಲ. ಏಕೆಂದರೆ ತಿಳಿದುಕೊಳ್ಳುವ ಪ್ರಯತ್ನ ಮಾಡುತ್ತಿಲ್ಲ. ಅದು 'ನಿದ್ದೆ' ಯಲ್ಲಿದೆ. ನಿದ್ದೆ ದೈಹಿಕ ಅನಿವಾರ್ಯ ಅವಶ್ಯಕತೆಯಾದರೂ, ಅದು ಮಾನವನ 'ಜಡತ್ವ' ವನ್ನು ಹೇಳುತ್ತದೆ. ಈ ಜಡತ್ವದಿಂದಾಗಿ ಆತನಿಗೆ ಮಂಕು ಕವಿದಿದೆ. ಈ ಮಂಕು (ಮಂಪರು) ತನದಿಂದಾಗಿ ಆತ ದಾರಿ ತಪ್ಪಿದ್ದಾನೆ. 'ತಪ್ಪಿತು ಹಾದಿ'. ಯಾವುದನ್ನು ಮನುಷ್ಯ ಮಾಡಬೇಕಾಗಿತ್ತೋ, ಆತ ಎಲ್ಲಿ ನಡೆಯುಬೇಕಾಗಿತ್ತೋ ಅದು ಸಾಧ್ಯವಾಗಿಲ್ಲ. ಇದರಿಂದ ಜಗತ್ತಿನ ಶಾಂತಿಯಹಾದಿ ತಪ್ಪಿದೆ. ಶಾಂತಿಯ ಹಾದಿ ತಪ್ಪಿದ ಮೇಲೆ, ಅದಕ್ಕೆ ವಿರುದ್ಧವಾದ ಕ್ರಿಯೆಯನ್ನು ಅನುಭವಿಸಲು ಆತ ಸಿದ್ಧನಿರಬೇಕಾಗಿದೆ. 'ಅರಣ್ಯ' ಎಂಬ ಪದ ಪ್ರಾಕೃತಿಕ ಸಂಪತ್ತನ್ನು ಹೇಳಿದರೂ, ಅದಕ್ಕಿರುವ ಮತ್ತೊಂದು ಅರ್ಥ 'ಕಾಡು' ಅಜ್ಞಾನವನ್ನೂ ಕೂಡ ಹೇಳುತ್ತದೆ. 'ಅರಣ್ಯ'ಅನಾಗರಿಕರ ನೆಲೆ. ಅಲ್ಲಿ ನಾಗರಿಕರ ಮೌಲ್ಯಗಳಿಗೆ ಅವಕಾಶವಿಲ್ಲ. ಅಲ್ಲೆಲ್ಲಾ ರಕ್ಕಸ ನೀತಿಯ ರಾಜ್ಯಭಾರ. ಮಾನವೀಯತೆಯೆಂಬ ತತ್ವಕ್ಕೆ ಬೆಲೆ ಇಲ್ಲ. 'ಅರಣ್ಯ' ಎಂಬ ಪದ ಮಾನವನ ರಕ್ಕಸ ನೀತಿಗೆ ಸಂಕೇತವಾಗುತ್ತದೆ. ಸಾಮಾಜಿಕ ಅನ್ಯಾಯಗಳ ಪರಂಪರೆ ಮಿತಿ ಮೀರಿರುವುದನ್ನು 'ಅನಂತವಾದುದು ವನ ವಿಸ್ತೀರ್ಣ' ಎಂಬ ಮಾತುಗಳಲ್ಲಿ ಕವಿ ವ್ಯಕ್ತಪಡಿಸುತ್ತಾರೆ. ಜೊತೆಗೆ, ಮೇಲಿನ ಮಾತುಗಳು ಸಾಮಾನ್ಯಾರ್ಥದಲ್ಲಿ ಕವಿ ಕಂಡ ಅನುಭವವನ್ನು ಮಾತ್ರ ಹೇಳುತ್ತಿವೆಯೆನ್ನಿಸುತ್ತದೆ. ಹೀಗೆ ಕವನದ ಪ್ರತಿಸಾಲುಗಳೂ ಕ್ರಿಯಾತ್ಮಕವಾಗುವ ರೀತಿ, ಅರ್ಥಪಡೆದುಕೊಳ್ಳುವ ರೀತಿ ವಿಶಿಷ್ಟ ಎನಿಸಿಕೊಳ್ಳುತ್ತದೆ.

ಆ 'ಅರಣ್ಯ' ದ ಚಿತ್ರವನ್ನು ಮುಂದಿನ ಚರಣಗಳು ಚಿತ್ರಿಸುತ್ತವೆ. 'ಹೆಮ್ಮರಗಳು" ಹೆಣೆದಿರುವ ಬಳ್ಳಿಗಳು"ಮುಳ್ಳಿನ ಪೊದೆಗಳು"ಗರಗಸ ವಳ್ಳಿ"ಪಾಪಾಸಿನಕಳ್ಳಿ' ಗಳಿಂದ ತುಂಬಿದೆ ಕಾಡು. ಈ ಮಾತುಗಳೆಲ್ಲವೂ ಪ್ರಕೃತಿಯ ಘೋರತ್ವವನ್ನು ನುಡಿಯುತ್ತವೆ. ಕವಿಯದಾರಿ ಸುಗಮವಲ್ಲ. ಹೋರಾಟದಿಂದ ಮಾತ್ರ ಮುಂದೆ ಸಾಗಬೇಕು. ಹೆಮ್ಮರ, ಹೆಣೆದಿರುವ ಬಳ್ಳಿ, ಮುಳ್ಳಿನ ಪೊದೆಗಳು, ಪಾಪಾಸಿನ ಕಳ್ಳಿಯಂಥ ಭಯಂಕರ ಅಡಚಣೆಗಳು ಕವಿಯನ್ನು ತಡೆಯುತ್ತವೆ. ದುಷ್ಟ ಶಕ್ತಿಗಳು ಸಮಾಜವನ್ನು ಆಳುತ್ತವೆ. ಅವುಗಳ ವಿರುದ್ಧ ಹೋರಾಡುವ ದೈತ್ಯಶಕ್ತಿಯೊಂದರ ಅವಶ್ಯಕತೆ ಯಿದೆಯೆಂಬುದನ್ನು ಕವನ ಇಲ್ಲಿ ಹೇಳುತ್ತದೆ. ಪ್ರಕೃತಿಯು ಭಯಾನಕವಾಗಿತ್ತು ಎಂಬುದನ್ನು ಚಿತ್ರಿಸಿರುವುದರಿಂದ, ಮುಂದೆ ಬರುವ ರೌದ್ರತೆಗೆ ಓದುಗನನ್ನು ಅನುವು ಮಾಡಿಕೊಟ್ಟಂತಾಗುತ್ತದೆ.

ನುಗ್ಗಿದೆ ನಾನಾ ಹಳುವಿನಲಿ ;
ಆ ಕನಸಿನ ಹೆಗ್ಗಾಡಿನಲಿ.
ಅಲ್ಲಿದ್ದುದು ಬೆಳಕೆಂಬುವುದಲ್ಲ.
ಕತ್ತಲು ಅಲ್ಲ!
ಶಿವನೇ ಬಲ್ಲ!
ಪ್ರೇತಗಳಂದದಿ ಭೀತಿಯ ಛಾಯೆ
ಸುಳಿದಾಡಿತು ಅಲ್ಲಿ.
ಆ ಘೋರ ಕಾನನದಲ್ಲಿ!

ಕವಿ ಧೈರ್ಯ ಮಾಡಿ ಆ 'ಹಳುವಿನಲಿ' ನಗ್ಗುತ್ತಾನೆ. ಆ ಹಳುವನ್ನು ಕವಿ ಮುಂದೆ 'ಕನಸಿನ ಹೆಗ್ಗಾಡು' ಎಂದು ಕರೆಯುತ್ತಾರೆ. ಕನಸನ್ನು ಮತ್ತೆ ಮತ್ತೆ ಓದುಗನ ಮನದಲ್ಲಿ ಮೂಡಿಸುವುದೇ ಇದಾಗಿದೆ. ಕನಸೆಂಬ ಹೆಗ್ಗಾಡಿಗೆ ನುಗ್ಗಿ, ಅದನ್ನು ಕಲಕುವುದೇ, ಮಥಿಸುವುದೇ, ಮೊದಲ ಕರ್ತವ್ಯವಾಗುತ್ತದೆ. 'ಕನಸಿನ ಹೆಗ್ಗಾಡು' ಕಲಕಿದಾಗ ಹೊಸತರ ಉಗಮ ಸಾಧ್ಯವಾಗುತ್ತದೆ. ಈ ಮೂಲಕ ಓದುಗನು ಕಾಣುತ್ತಿರುವ ಕನಸನ್ನು ಕೆಣಕಿ, ಸಾಮಾಜಿಕವಾಗಿ ತೊಡುಗುವುದಕ್ಕೆ ಆತನನ್ನು ಪ್ರೇರೇಪಿಸಿದಂತಾಗುತ್ತದೆ. ಈ ಜಗತ್ತು ಕವಿಗೆ ವಿಚಿತ್ರವಾಗಿ ಕಾಣುತ್ತದೆ. 'ಅಲ್ಲಿದ್ದುದು ಬೆಳಕೆಂಬುವುದಲ್ಲ. ಕತ್ತಲು ಅಲ್ಲ! ಬೆಳಕೋ ಕತ್ತಲೋ ಶಿವನೇ ಬಲ್ಲ!' ಎಂಬ ಮಾತಿನಲ್ಲಿ ಅದನ್ನು ಗಮನಿಸಬಹುದು. ಈ ಜಗತ್ತಿನಲ್ಲಿ ನಿಜಕ್ಕೂ ಜ್ಞಾನವೆಂಬುದು ಮರೆಯಾಗಿದೆ. ದುಷ್ಟ 'ಹೆಮ್ಮರ' ಗಳು ಬೆಳೆದು ಕತ್ತಲನ್ನು ತುಂಬಿವೆ. ಆದರೆ ಬೆಳಕಿನಂತೆ ಕಾಣುವ ದೃಶ್ಯವಿದೆ. ಅದನ್ನು ಬೆಳಕೆಂದು ಒಪ್ಪಲು ಕವಿಗೆ ಸಾಧ್ಯವಾಗುತ್ತಿಲ್ಲ. ಕಪಟಿಗಳಿಂದ, ವಂಚಕರಿಂದ ಭರ್ತಿಯಾಗಿರುವ ಈ ಜಗತ್ತು ಎಂಥದೆಂಬುದನ್ನು ಕವಿ ತಾನು ಹೇಳಲಾರದವನ್ನಾಗಿ 'ಶಿವನೇ ಬಲ್ಲ' ಎನ್ನುತ್ತಾನೆ. ದೇವರ ಮೇಲೆ ಪರಿಸ್ಥಿತಿಯನ್ನು ಕವಿ ಹಾಕಿ' ಕೈ ತೊಳೆದು ಕೊಂಡಿಲ್ಲ. ಇಲ್ಲಿರುವುದು ವಿಸ್ಮಯ. ಯಾಕಾಯ್ತು? ಹೇಗೆ, ಎಂಬ ಆಶ್ಚರ್ಯದ ಪ್ರಶ್ನೆ. ಕವಿ ಇಲ್ಲಿಯವರೆಗೆ ಸೀಮಿತವಲಯದಲ್ಲಿ ವಿಹರಿಸುತ್ತಿದ್ದ. ಇಂದು ಹೊರ ಬಂದು ಕಂಡಾಗ ಕವಿಗೆ ಆಶ್ಚರ್ಯವಾಗುತ್ತದೆ; ಸಹಜವಾಗಿ 'ಶಿವನೇ

ಬಲ್ಲ' ಎಂಬ ಉದ್ಗಾರ ಹೊರಡುತ್ತದೆ. 'ಶಿವನೇ ಬಲ್ಲ' ಎಂಬ ಮಾತನ್ನು ಕವಿ ಎರಡು ಸಾರಿ ಬಳಸಿದ್ದಾರೆ. ಇದು ಕೇವಲ ಶಿಲ್ಪದ ದೃಷ್ಟಿಯಿಂದ ಮಾತ್ರವಲ್ಲದೆ, ವಸ್ತು ಓದುಗನ ಮೇಲೆ ಪ್ರಭಾವಯುತವಾಗಿ ಮೂಡವಂತಾಗಲು ಸಹಾಯಕವಾಗುತ್ತದೆ. ' ಶಿವ' ಸೌಂದರ್ಯದ ಸಂಕೇತ. ಕವಿಯು ಹಿಂದಿನ ಮಾನಸಿಕ ಪರಿಸ್ಥಿತಿಗೆ ಶಿವಕಲ್ಪನೆ ಸರಿಹೊಂದುತ್ತದೆ. ಶಿವನಿಗೆ 'ರುದ್ರ' ಎಂಬ ಇನ್ನೊಂದು ಅರ್ಥವಿರುವುದರಿಂದ ಮುಂದೆ ಕವನ ಪಡೆದುಕೊಳ್ಳುವ ತಿರುವಿಗೆ ಈಗಲೇ ಓದುಗ ಸಿದ್ಧವಾಗುವಂತೆ ಮಾಡುತ್ತದೆ. 'ರುದ್ರ' ಎಂಬ ಶಿವ ಪರ್ಯಾಯ ಪದ ಮುಂದೆ ಬರುವ 'ಪ್ರೇತಗಳಂದದಿ ಭೀತಿಯ ಛಾಯೆ' ಎಂಬರ್ಥಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತದೆ. ಆ ಭಯಂಕರ ಕಾಡಿನ 'ಕತ್ತಲು-ಬೆಳಕು' ಕವಿಗೆ ಆಶ್ಚರ್ಯ ಮೂಡಿಸುವುದು ಸ್ವಲ್ಪ ಹೊತ್ತು ಮಾತ್ರ. ತೀಕ್ಷ್ಣ ಮತಿಯಾದ ಕವಿ ಬೇಗ ಪರಿಸ್ಥಿತಿಯನ್ನು ಅರಿತುಕೊಂಡಂತೆ ತೋರುತ್ತದೆ ಆದ್ದರಿಂದ ಆ ಸುತ್ತಲ ಪರಿಸರ ಘೋರವಾಗಿತ್ತು ಎಂಬುದನ್ನು 'ಪ್ರೇತಗಳಂದದಿ ಭೀತಿಯ ಛಾಯೆ' ಮಾತ್ರ. ಅದು ಕವಿಗೆ 'ಭೀತಿ' ಯನ್ನು ತರುವುಂತಾಗಿದೆ ಛಾಯೆ 'ಸುಳಿ ಸುಳಿದಾಡಿತು' ಎಂಬಲ್ಲಿ ಈ ಸಾಮಾಜಿಕ ಅಂಧತ್ವ ಕವಿಗೆ ಸುಳಿಸುಳಿದು ಕಾಣಿಸಿಕೊಳ್ಳಲು ತೊಡಗಿತು ಎಂಬರ್ಥವಿದೆ.

ಕವಿಗೆ ತನ್ನ ವ್ಯವಸ್ಥೆಯ ಸಮಗ್ರ ಅರಿವು ಮೂಡತೊಡಗಿದವು. 'ಆ ಘೋರ ಕಾನನದಲ್ಲಿ' ನಡೆಯುವುದು ಅನಿವಾರ್ಯ. ನಡೆದು ನಿಜವಾದ ಬೆಳಕನ್ನು ಕಾಣಬೇಕಾಗಿದೆ. ಕವಿಯ ನಡೆಯುವ ಕ್ರಿಯೆಯನ್ನು ಮುಂದಿನ ಸಾಲುಗಳು ಹಿಡಿದಿಡುತ್ತವೆ. 'ನಡದೇ ನಡದೇ ನಡೆದೂ ನಡೆದೆ, ಸಹಾಸ ಬಿಡದೆ, ಎದೆ ಗೆಡದೆ' ಈ ಮಾತುಗಳಲ್ಲಿ ಬರುವ ದೀರ್ಘಗಳು ಕ್ರಿಯೆಯ ಮೇಲೆ ತಂದು ಕೊಡುವ ವಿಶಿಷ್ಟ ಒತ್ತಿನಿಂದಾಗಿ ಕವನವನ್ನು ಮುಂದೆ ನಡೆಸಲು ಸಹಾಯಕವಾಗುತ್ತವೆ. 'ಸಾಹಸ ಬಿಡದೆ, ಎದೆಗೆಡದೆ' ಎಂಬ ಪದಗಳು ಕವಿಯು ದಾರಿಯಲ್ಲಿ ತಳೆದ ನಿಲವನ್ನು ಸೂಚಿಸುತ್ತವೆ. ಕವಿಗೆ ತನ್ನ ಪರಿಸ್ಥಿತಿಯ ಅರಿವಾದ್ದರಿಂದ ಈ ಭಯಂಕರ 'ಕಾನನ' ದಲ್ಲಿ ನಡೆಯಲು, ನಡೆದು ಸತ್ಯ ಕಾಣಲು ತೀರ್ಮಾನಿಸಿದ್ದಾರೆ.

ಸುತ್ತಲು ಮೌನ!
ಶ್ಮಶಾನ ಮೌನ
ಕಾಡನು ದಾಟಿದೆ: ಮುಂಗಡೆ ಬೆಟ್ಟ;
ಶಿಖರವೊ ನಿಂತಿದೆ ಮುಗಿಲಿನ ಮುಟ್ಟ !
ಹತ್ತೀ ಹತ್ತೀ ಹತ್ತೀ ಹತ್ತೀ
ಕಡೆಯಲಿ ಸಿಕ್ಕಿತು ನಡುನೆತ್ತಿ !
ನೋಡಿದೆನಲ್ಲಿ
ನಡುನೆತ್ತಿಯಲಿ !
ಯಾವುದೊ ಊರು ಆ ಊರು ?
ಬರಿ ಮಾಯದ ಊರು !

'ಸುತ್ತಲು ಮೌನ! ಶ್ಮಶಾನ ಮೌನ' -ಮೌನವನ್ನು ಇಲ್ಲಿ ಕುವೆಂಪು ಬಳಸಿಕೊಳ್ಳುವ ರೀತಿ ಚೆನ್ನಾಗಿದೆ. ಯಾವುದೇ ಸಾಮಾನ್ಯ ಪದದಲ್ಲಿ ವಿಶಿಷ್ಟ ಅರ್ಥ ಹೊರಡಿಸುವಾಗ ಪದಗಳನ್ನು ಬಳುಕಿಸುವ ರೀತಿ ಮೆಚ್ಚುವಂಥದು. ಮೌನ ಧ್ಯಾನಕ್ಕೆ ಹೇಗೆ ಸಂಕೇತವಾಗುತ್ತದೋ ಹಾಗೆಯೇ ನಿರ್ಜೀವತ್ವಕ್ಕೂ ಸಂಕೇತವಾಗುತ್ತದೆ. ಎಂಥ ಮೌನ? 'ಶ್ಮಶಾನ ಮೌನ' ವೆಂದು ಕವಿಯ ಹೇಳಿಕೆ. 'ಶ್ಮಶಾನ'ಜೀವವಿಲ್ಲದ ಅಸ್ಥಿಪಂಜರಗಳನ್ನು ಹೂಳುವ ಸ್ಥಳ. 'ಶ್ಮಶಾನ'ಹೆದರಿಕೆಯನ್ನು ತರುವಂಥ ಜಾಗ. ಹೀಗೆ ಕವಿಯು ನಡೆದಾಡುವ ಕ್ರಿಯೆಯಲ್ಲಿ ಮೌನ ಹೆದರಿಕೆ ಹುಟ್ಟಿಸುತ್ತಿತ್ತು. ಸಾಲಿನಿಂದ ಸಾಲಿಗೆ ತೀವ್ರವಾಗಿ ಕ್ರಿಯೆ ಸಾಗುತ್ತದೆ. 'ಕಾಡನು ದಾಟಿದೆ;ಮುಗಡೆ ಬೆಟ್ಟ' ಈ ಸರಳ ಮಾತುಗಳು ಹೊರ ನೋಟಕ್ಕೆ ಲಾಲಿತ್ಯದಂತೆ ತೋರಿದರೂ ಭವ್ಯ ಭೀಷಣ ಚಿತ್ರ ಕೊಡುತ್ತದೆ. ಕಾಡನ್ನು ದಾಟುವ ಕ್ರಿಯೆಯ ಫಲ-ಕಾಣಿಸಿಕೊಂಡ 'ಬೆಟ್ಟ'. 'ಬೆಟ್ಟ' ಕಷ್ಟ ಪರಂಪರೆಗಳ ಸಂಕೇತ. ಕವನದ ಮುಂದಿನ ಗತಿಯನ್ನು 'ಬೆಟ್ಟ' ಸೂಕ್ಷ್ಮವಾಗಿ ಕೊಡುತ್ತದೆ. ಕಷ್ಟ ಪರಂಪರೆಗಳು ಸಾಮಾನ್ಯವಲ್ಲ, ಭಯಾನಕವಾದವು ಎಂಬುದನ್ನು 'ಶಿಖರವೊ ನಿಂತಿದೆ ಮುಗಿಲಿನ ಮುಟ್ಟ' ಎಂಬ ಮಾತುಗಳು ಅಭಿವ್ಯಕ್ತಿಸುತ್ತವೆ. ಹತ್ತುವ ಕ್ರಿಯೆ ಎಂಥ ದಾರುಣವಾದುದುದು ಎಂಬುದನ್ನು ಕವಿ ಮುಂದೆ ಹೇಳುತ್ತಾರೆ. ಇಲ್ಲಿ ಬಳಸಿರುವ 'ಶಿಖರ' ಬೆಟ್ಟದ ತುದಿ. ಅದು ಮುಗಿಲನ್ನು ಮುಟ್ಟಿದೆ. ಅಷ್ಟು ಎತ್ತರವಾಗಿದೆ ಎಂಬುದನ್ನು 'ಮುಟ್ಟ'ಪದ ಹೇಳುತ್ತದೆ. 'ಮಟ್ಟ' ಎಂಬ ಪದವನ್ನು ಈ ಸಂದರ್ಭದಲ್ಲಿ ನೆನಪಿಗೆ ತಂದುಕೊಡುತ್ತದೆಯಾದ್ದರಿಂದ 'ಶಿಖರವೂ ಮುಗಿಲಿನ ಮಟ್ಟಕ್ಕೆ ನಿಂತಿದೆ' ಎಂಬ ಅರ್ಥವಾಗಿ ಮುಂದೆ ಕವಿ ಪಡಬೇಕಾದ ಕಷ್ಟಗಳನ್ನು ನೆನಪಿಗೆ ತರುತ್ತದೆ.

ಈ ಸಂದರ್ಭದಲ್ಲೇ ಮತ್ತೊಂದು ಅಂಶವನ್ನು ಗಮನಿಸುವುದ ಸೂಕ್ತ. ಈ ಕವನದ ಪ್ರಾರಂಭದಿಂದಲೂ ವಸ್ತು ಮತ್ತು ಕ್ರಿಯೆ ಜೊತೆ ಜೊತೆಯಲ್ಲೇ ನಡೆಯುತ್ತವೆ. ಉದಾಹರಣೆಗೆ ಹಿಂದೆ ಬರುವ 'ನಡದೇ ನಡೆದೇ..........' ಎಂಬ ಸಾಲುಗಳಲ್ಲಿ ಮತ್ತು ಮುಂದಿನ ಈ ಸಾಲುಗಳ್ಳಿ ಅದನ್ನು ಗಮನಿಸಬಹುದು: 'ಹತ್ತೀ ಹತ್ತೀ ಹತ್ತೀ ಹತ್ತಿ ಕಡೆಯಲ್ಲಿ ಸಿಕ್ಕಿತು ನಡು ನೆತ್ತಿ' ಹತ್ತುವ ಕ್ರಿಯೆ ಪದಗಳಲ್ಲಿ ಅಭಿನಯಗೊಳ್ಳುತ್ತದೆ. 'ಹತ್ತೀ ಹತ್ತೀ'ಎಂಬಲ್ಲಿನ ದೀರ್ಘತೆ 'ಶಿಖರ'ದ ಕಡಿದನ್ನು ಮತ್ತು ಅದನ್ನು ಏರುವ ಸಾಹಸ ಮತ್ತು ಕಷ್ಟವನ್ನು ಶಕ್ತಿವತ್ತಾಗಿ ಧ್ವನಿಸುತ್ತದೆ. ಇಲ್ಲಿನ ತೀವ್ರ ಗತಿಯ ಕ್ರಿಯೆ ವಸ್ತುವಿನ ಕಡೆ ಓದುಗನನ್ನು ಅಷ್ಟೇ ತೀವ್ರಗತಿಯಿಂದ ಸೆಳೆಯಲು ಸಹಾಯಕವಾಗಿದೆ. ಕವನ ತನ್ನ ಪ್ರಾರಂಭದ ಹಂತದಲ್ಲೇ ಕ್ರಿಯಾ ಶೀಲವಾಗಿದ್ದು ಓದುಗನಲ್ಲಿ ಮೈ ಜುಮ್ಮೆನ್ನಿಸುವಂಥ ಅನುಭವವನ್ನು ಉಂಟು ಮಾಡುವುದರ ಜೊತೆಗೆ ಕುತೂಹಲವನ್ನು ಕೆರಳಿಸುತ್ತಾ ಸಾಗುತ್ತದೆ. 'ಕಾಡನು' ದಾಟಿದ ಕ್ರಿಯೆಗೆ ಸಿಕ್ಕ ಫಲ-ಬೆಟ್ಟದ ಶಿಖರವನ್ನು 'ಹತ್ತಿ'ದ ಕ್ರಿಯೆಗೆ ಸಿಕ್ಕಿದ ಫಲ-'ಕಡೆಯಲಿ'ನಡು ನೆತ್ತಿ.'ಇಲ್ಲಿಗೆ ಕವನದ ಕ್ರಿಯಾತ್ಮಕತೆ ನಿಂತು ಮುಂದೆ ಮತ್ತೊಂದು ಮಜಲಿಗೆ ವ್ಯಾಪ್ತಿಗೊಳ್ಳುತ್ತದೆ. ಕವಿಯು ಚಲನ ಕ್ರಿಯೆಗೆ ತಡೆ ಬರುತ್ತದೆ. ಕಾರಣ, ಆತ ಇನ್ನೂ ಮುಂದೆ ಸಾಗಲಾರದಂಥ 'ನಡುನೆತ್ತಿಗೆ' ತಲುಪಿದ್ದಾನೆ. ಇನ್ನು ಅವನು 'ಕಾಣುವುದು' ಮಾತ್ರ. ಕವನದ

ಸಂದರ್ಭದಲ್ಲಿ ಈ ಕಾಣುವಿಕೆ 'ಕಾಣ್ಕೆ'ಯಾಗಿ ಪರಿವರ್ತಿತವಾಗುವ ವಿಧಾನವನ್ನು ಮುಂದೆ ನೋಡಬಹುದು.

ಕವನ ಮುಂದೆ ದೃಶ್ಯಕಾವ್ಯವಾಗಿ ಪರಿವರ್ತನೆಗೊಳ್ಳುತ್ತದೆ, ಹಿಂದಿನ ಕ್ರಿಯಾತ್ಮಕತೆಗೆ ಒಂದು ನೆಲೆ ಸಿಗುತ್ತದೆ. ಕವಿ ಕಾಣುವ ದೃಶ್ಯವೇ ನಮ್ಮ ಸಾಮಾಜಿಕ 'ಜೀವನ'ವಾಗಿದ್ದು, ನಮ್ಮ ಸಮಾಜವನ್ನು ತುಂಬಾ ವೈಚಾರಿಕವಾಗಿ ನೋಡಲಾಗಿದೆ. 'ನೋಡಿದೆನಲ್ಲಿ ನಡುನೆತ್ತಿಯಲಿ', 'ಏನನ್ನೋನೋಡುತ್ತಿದ್ದಾನೆ. ಏನು?ಕುತೂಹಲ ಓದುಗನಲ್ಲಿ ಮೂಡುತ್ತದೆ. 'ನಡುನೆತ್ತಿ'ಇಲ್ಲಿ ಕವಿಗ ಒಂದು ದೃಷ್ಟಿಕೋನ (point of view)ವಾಗುತ್ತದೆ. ವಸ್ತುವನ್ನು ದೂರದಿಂದ ನಿಂತು, ಅದರ ಸ್ಥಿತಿಯನ್ನು ಸಂಪೂರ್ಣ ಅರಿತು ಕೊಳ್ಳಲು ಸಹಾಯಕವಾಗುತ್ತದೆ. ಇದು ನಿರೂಪಕನಾದ ಕವಿಗೆ ಮಾತ್ರವಲ, ಓದುಗನಿಗೂ ಸಹ. ವಸ್ತುವನ್ನು ಕವಿಯ ಮಾನಸಿಕ ಸ್ಥಿತಿಯಲ್ಲಿ ನಿಂತು ಅನುಭವಿಸಲು ಸಹ ಈ ತಂತ್ರ ಸಹಾಯಕವಾಗುತ್ತದೆ. ಹೀಗೆ ಕವಿ ಮತ್ತು ಓದುಗ ಇಬ್ಬರೂ ನೋಡವ ದೃಶ್ಯ ಸಮಸ್ಯೆಯನ್ನು ತಂದೊಡ್ಡುತ್ತದೆ. ಅವರು ಈವರೆಗೆ ಕಾಣದ್ದನ್ನು ಇಂದು ಕಾಣುವಂತಾಗುತ್ತದೆ.ಈ ಹೊಸ ವಿಷಯ ಯಾವುದೆಂಬ ಆಶ್ಚರ್ಯ ಇಬ್ಬರಲ್ಲೂ ಮೂಡುತ್ತದೆ.' ಯಾವುದೋ ಊರು ಆ ಊರು? ಬರಿಮಾಯದ ಊರು'! ಈ ಮಾತಿನಲ್ಲಿ ಆಶ್ಚರ್ಯವಿರುವಂತೆ ಸಮಸ್ಯೆಯೂ ಇದೆ. ಕವಿ ಇಲ್ಲಿವರೆಗೆ ಕಂಡಿರಲಿಲ್ಲ. ಇಂದು ಇದ್ದಕ್ಕಿದ್ದಂತೆ ಗೋಚರಿಸಿದೆ. 'ಮಾಯದ ಊರಿ' ನಂತೆ ಕಂಡಿದೆ. ಕವಿಗೆ ಇಲ್ಲಿಯವರೆಗೂ ವಾಸ್ತವಿಕ ಅರಿವಿರಲಿಲ್ಲ, ಇಂದು ಆ ಅರಿವು ಉಂಟಾಗಿದೆ. ಇಲ್ಲಿಯವರೆಗೆ ಆ ಅರಿವು ತನಗೆ ಬರದ್ದಕೆ ಆಶ್ಚರ್ಯವಾಗಿದೆ. ವಾಸ್ತವಿಕತೆಯ ಅರಿವಾದೊಡನೆ ಸಮಸ್ಯೆ ಇದಿರಾಗಿದೆ. ಈ ಮಾತಿನಲ್ಲಿ ವಿಡಂಬನೆಯೂ ಇರುವಂತೆ ತೋರುತ್ತದೆ. ತನ್ನ ಇಲ್ಲಿಯವರೆಗಿನ ಕಲ್ಪನೆಯ ಜಗತ್ತಿನ ಬಗ್ಗೆ,ತನ್ನ ಬೇಜವಾಬ್ದಾರಿತನದ ಬಗ್ಗೆ ಕವಿ ಟೀಕಿಸಿಕೊಳ್ಳುತ್ತಿರುವಂತೆ ತೋರುತ್ತದೆ. ಅದು ಆತ್ಮ ಶೋಧನೆಯೂ ಆಗಬಹುದು. 'ಮಾಯದ ಊರು'ಎಂಬ ಪದ ಕವಿಕನಸು ಕಾಣುತ್ತಿರುವ ಕ್ರಿಯೆಯನ್ನು ಜ್ಞಾಪಿಸುತ್ತದೆ. ಆದರೆ ಆ ಕನಸು ಬರೀ ಕನಸಾಗಿರದೆ ಲೋಕಸತ್ಯದ ಪ್ರತಿಮಾ ರೂಪಾವಾದ್ದರಿಂದ ಕವನದ ಶಿಲ್ಪದಲ್ಲಿ ಎಲ್ಲೂ ಬಿರುಕು ಬರುವುದಿಲ್ಲ.

ಇನ್ನು ಮುಂದೆ ಕವನ ಸಾಮಾಜಿಕ ಅಸಮಾನತೆಯನ್ನು ನೇರವಾಗಿ ಹೇಳತೊಡಗುತ್ತದೆ. ಬಡವ-ಬಲ್ಲಿದರನ್ನು ಪಕ್ಕ ಪಕ್ಕದಲ್ಲಿಟ್ಟು ತೂಗಿ, ಓದುಗರ ಗಮನಕ್ಕೆ ಈ ಸಾಮಾಜಿಕ ಶೋಷಕತನ ಅರಿವಿಗೆ ಬರುವಂತೆ ಮಾಡತೊಡುಗುತ್ತದೆ. ಆ 'ಮಾಯದ ಊರು' ಯಾವುದೋ ಕಲ್ಪನೆಯ ಊರಾಗಿರದೆ. ಭಾರತೀಯ ಸಮಾಜವೇ ಆಗಿರುವುದರಿಂದ ಅದಕ್ಕೊಂದು ಮಹತ್ವ ಬರುತ್ತದೆ. ಭಾರತೀಯ ಸಮಾಜದಲ್ಲಾಗುತ್ತಿರುವ ಶೋಷಣೆ ಕವಿಯನ್ನು ತುಂಬ ಕಂಗೆಡಿಸಿದೆ. ಈ ಕವನ ಬರೆದು ಇಂದಿಗೆ ಸುಮಾರು ಐವತ್ತು ವರ್ಷಗಳಾಗುತ್ತ ಬಂದಿದೆ. ಅಂದಿದ್ದ ಈ ಸಮಾಜಿಕ ಅಸಮತೆಯಲ್ಲಿ ಎಳ್ಳಷ್ಟೂ ಕಡಿಮೆಯಾಗದಿರುವುದು ಈ ಸಮಾಜದ ದುರಂತವನ್ನು ಹೇಳುವುದರ ಜೊತೆಗೆ, ನಮ್ಮ ಜನರ ಪ್ರತಿಭಟನೆ ಇಲ್ಲದ ಬದುಕಿನ ಬಗ್ಗೆ ಬೆಳಕು ಚೆಲ್ಲುತ್ತದೆ. ಕವನವು

ಸಾಮಾಜಿಕ ಅಂತರವನ್ನು ಮುಂದಿನ ರೀತಿಯಲ್ಲಿ ಚಿತ್ರಸುತ್ತಾ ಹೋಗುತ್ತದೆ. ವಸ್ತುಸ್ಥಿತಿ ದೃಶ್ಯ ದೃಶ್ಯವಾಗಿ ಓದುಗನ ಮುಂದೆ ಕಾಣಿಸಿಕೊಳ್ಳುತ್ತದೆ.

ಧನಿಕರ ಮನೆಗಳು ಒಂದೆಡೆ ನಿಂತಿವೆ,
ಬಡವರ ಗುಡಿಸಲು ಒಂದೆಡೆ ನಿಂತಿವೆ
ಜ್ಯೋತಿಯ ಮಣಿದೀಪಗಳಲ್ಲಿ;
ಕತ್ತಲು, ಕಗ್ಗತ್ತಲು ಇಲ್ಲಿ!
ಹಾಡಿನ ನುಣ್ದನಿಯುತ್ತ,
ಗೋಳಿನ ನೀಳ್ದನಿಯಿತ್ತ
ಕೂಳನು ಹೆಮ್ಮೆಗೆ ಬಿಸುಡುವರಲ್ಲಿ,
ಹೊಟ್ಟೆಗೆ ಇಲ್ಲದೆ ಕೊರಗುವರಿಲ್ಲಿ!
ಆ ಕಡೆ ಉದ್ಯಾನ,
ಈ ಕಡೆ ಶ್ಮಶಾನ!
ಪಿತಾಂಬರಗಳ ಹೊದೆಯುವರಲ್ಲಿ
ಕೌಪೀನಕ್ಕೆ ಚಿಂದಿಯು ಸಿಗದಿಲ್ಲಿ!

ಎರಡೆರಡು ಪಾದಗಳಲ್ಲಿ ಬಡವ-ಬಲ್ಲಿದರ ಆಂತರವನ್ನು ಗುರುತಿಸಿಕೊಂಡು ಕವಿ ಹೋಗುವುದನ್ನು ಕಾಣಬಹುದು. ಕವನದಲ್ಲಿ ವಸ್ತುನಿಷ್ಠ ನಿರೂಪಣೆಯಿದ್ದರೂ. ಕವಿಗೆ ಬಡವರ ಬಗ್ಗೆ ಪಕ್ಷಪಾತವಿದೆಯೆಂಬುದು ಮೇಲಿನಸಾಲುಗಳಿಂದ ವ್ಯಕ್ತವಾಗುತ್ತದೆ. ಶ್ರೀಮಂತರನ್ನೂ ಹೇಳವ ರೀತಿಗೂ. ಬಡವರನ್ನು ಹೇಳುವ ರೀತಿಗೂ ವ್ಯತ್ಯಾಸವಿದೆ. ಈ ವ್ಯತ್ಯಾಸ ವಸ್ತು ಸ್ಥಿತಿಯಲ್ಲೇ ಇದೆ. ಆದರೆ, ಬಡವರ ಬಗ್ಗೆ ಹೇಳುವಾಗ 'ಇಲ್ಲಿ' 'ಇತ್ತ' 'ಈ ಕಡೆ' ಎಂಬ ಪದಗಳನ್ನು ಬಳಸಿದರೆ, ಶ್ರೀಮಂತರ ಬಗ್ಗೆ ಬರೆಯುವಾಗ 'ಅಲ್ಲಿ' 'ಅತ್ತ' 'ಆ ಕಡೆ' ಎಂಬ ಪದಗಳನ್ನು ಬಳಸುತ್ತಾರೆ. 'ಅತ್ತ' ಎಂದು ಬಳಸುವಾಗಿನ ದೂರದ ಕಲ್ಪನೆಗಿಂತ 'ಇತ್ತ' ಎಂದು ಬಳಸುವಾಗಿನ ಹತ್ತಿರದ, ಆತ್ಮೀಯತೆಯ ಅನುಕಂಪದ ಧೋರಣೆ ಗಮನ ಸಳೆಯುತ್ತದೆ. ಕಾವ್ಯ ಸಂದರ್ಭದಲ್ಲಿ ಕಾವ್ಯನ್ಯಾಯವನ್ನು ಬಯಸುವಾಗ ಇದು ಅಸಹಜವಾಗುವುದಿಲ್ಲ. ಬಡವರು ಆನ್ಯಾಯ ಕ್ಕೊಳಗಾಗಿದ್ದಾರೆಂಬುದರಲ್ಲಿ ಅನುಮಾನವಿಲ್ಲ. ಅನ್ಯಾಯದ ತುಳಿತಕ್ಕೊಳಗಾಗಿದ್ದವರನ್ನು ಪ್ರೀತಿಯಿಂದ ಕಾಣುವುದು, ಅನುಕಂಪೆಯಿಂದ ಕಾಣುವುದು ಸಹಜವಾಗಿರುತ್ತದೆ. ಕುವೆಂಪು ಅವರಿಗಿರುವ ಈ ಬಡವ ಪಕ್ಷಪಾತವೇ ಈ ಕವನವನ್ನು ಬರೆಸಿದೆಯೆಂಬುದನ್ನು ಮರೆಯುವಂತಿಲ್ಲ. ಈ ಬಡವ ಪಕ್ಷಪಾತ ಕೇವಲ ಅನುಕಂಪೆಯಿಂದ ಬಂದುದಲ್ಲ. ಅವರ ಬದುಕು ಬೆಳೆದು ಬಂದ ಪರಿಸರದಿಂದ ಉದ್ಭವಿಸಿದ್ದು. ಅವರಿಗಿರುವ ಮಾನವೀಯತೆ ಮೇಲಿನ ನಂಬಿಕೆಯನ್ನು ಅವರ ಎಲ್ಲ ಸಾಹಿತ್ಯ ಪ್ರಾಕಾರಗಳಲ್ಲು ಗುರುತಿಸಬಹುದು. ಸಾಮಾಜಿಕ ಕಳಕಳಿ ಮತ್ತು ಮಾನವೀಯತೆ ಯಿಂದಾಗಿ ಸಾಮಾಜಿಕ ಅಸಮಾನತೆಯ ವಿರುದ್ಧ ಮಾತನಾಡುವ ಧೈರ್ಯ ಕುವೆಂಪು ಅವರಿಗಿದೆ.

'ಧನಿಕರ ಮನೆಗಳು' 'ಬಡವರ ಗುಡಿಸಲು' ನಮ್ಮ ಸಮಾಜದ ಎರಡು ಅತಿರೇಕದ ಚಿತ್ರವನ್ನು ಕೊಡುತ್ತವೆ . ಇಲ್ಲಿನ 'ಮನೆಗಳು', 'ಗುಡಿಸಲು'-ಪದಗಳು ಕಣ್ಮುಂದೆ ಚಿತ್ರವನ್ನು ಮೂಡಿಸುತ್ತವೆ, 'ಮನೆ, ಇಂದಿಗೂ ಗ್ರಾಮೀಣ ಸಮಾಜದಲ್ಲಿ ಉಳ್ಳವರ ಸ್ವತ್ತು. 'ಗುಡಿಸಲು' ಬಡವರ ಸಾಮಾನ್ಯ ನೆರಳು. 'ಮನೆ' ಎಂದಾಕ್ಷಣ ನೆನೆಪಿಗೆ ಬರುವ ವೈಭವದ ಕಲ್ಪನೆ, 'ಗುಡಿಸಲು' ಎಂದಾಕ್ಷಣ ನೆನಪಿಗೆ ಬರುವ ಬಡತನ ಕಲ್ಪನೆ ಓದುಗನಲ್ಲಿ ವಸ್ತು ಸ್ಥಿತಿ ತಿಳಿಯಾಗಿ ಅರ್ಥವಾಗುವಂತೆ ಮಾಡುತ್ತದೆ. ಧನಿಕರ ಮನೆಯಲ್ಲಿ ಬೆಳಗುವ 'ಜ್ಯೋತಿ' ಇಲ್ಲಿ ಜ್ಞಾನದ ಅರ್ಥವನ್ನು ಕೊಡುವುದಿಲ್ಲ. ಕಬಳಿಸುವ ದೈತ್ಯಶಕ್ತಿಯನ್ನು ನೆನಪಿಗೆ ತರುತ್ತದೆ. 'ಕತ್ತಲು ಕಗ್ಗತ್ತಲು' ಎಂಬ ಮಾತು ತುಂಬಾ ಅರ್ಥಪೂರ್ಣ ವಾಗಿದ್ದು ಬಡವರ ಬದುಕನ್ನು ಕಣ್ಮುಂದೆ ತರುತ್ತದೆ. 'ಕತ್ತಲು' ಅಜ್ಞಾನವನ್ನು ಸಂಕೇತಿಸಿದರೂ, ಜೊತೆಯಲ್ಲೇ ಬಡತನದ ಧಾರುಣತೆಯನ್ನು ಹೇಳುತ್ತದೆ. ತಮ್ಮ ಸ್ಥಿತಿಯ ಅರಿವಿಲ್ಲದೆ ನರಳು ತ್ತಿರುವಂತೆ ಕವಿಗೆ ಭಾಸವಾಗಿದೆ. 'ಕಗ್ಗತ್ತಲು' ಎಂಬ ಪದ ಹಿಂದಿನ ಕತ್ತಲನ್ನೂ ಮತ್ತಷ್ಟು ಒತ್ತಿಹೇಳಿ ಉತ್ತಮ ವ್ಯಂಜಕವಾಗುತ್ತದೆ. ಮುಂದೆ ಬುರವ 'ನುಣ್ದನಿ' ಮತ್ತು 'ನೀಳ್ದನಿ'ಗಳನ್ನು ಕವಿ ತುಂಬಾ ಚಮತ್ಕಾರವಾಗಿ ಬಳಸಿಕೊಳ್ಳುತ್ತಾರೆ.' ನುಣ್ದನಿ'ತೃಪ್ತಿಯನ್ನು ವೈಭವವನ್ನು, 'ನೀಳ್ದನಿ'ಅತೃಪ್ತ ಆರ್ತತೆಯನ್ನು ಹೇಳುತ್ತವೆ. 'ನೀಳ್' ಎಂಬ ಪದ ತಂದು ಕೊಡುವ ವಿಸ್ತಾರದ ಕಲ್ಪನೆ., ಬಡವರ ಎದೆಯಿಂದ ಹೊಮ್ಮುತ್ತಿರುವ ನೋವನ್ನು ಅಭಿವ್ಯಕ್ತಿಸುತ್ತದೆ. ಧನಿಕರು ಕೂಳನ್ನು 'ಹೆಮ್ಮೆಗೆ' ಬಿಸುಡುವರು-ಎಂಬಲ್ಲಿರುವ 'ಹೆಮ್ಮೆಗೆ' ಎಂಬ ಮಾತು ಗಮನ ಸೆಳೆಯುತ್ತದೆ. 'ಹೆಮ್ಮೆಗೆ'ಅಂದರೆ ಜಂಬಕ್ಕೆ, ಶೋಕಿಗೆ, ಹಿರಿಮೆಗೆ ಸಂತೋಷಕ್ಕೆ ಎಂದರ್ಥ. ಅಸಹ್ಯವಾದ ಜಂಬ ತಮ್ಮ ಶ್ರೀಮಂತಿಕೆ ಯಿಂದ ಮೆರೆಯುವ ಅಟ್ಟಹಾಸವನ್ನು ಧ್ವನಿಸುತ್ತದೆ. ತಮ್ಮಲ್ಲಿರುವುದನ್ನು ತಿಂದೂ ತಿನ್ನಲಾರದೆ ಆತ್ಮತೃಪ್ತಿಗೆ ಬಿಸಾಡುತ್ತಾರೆ. ಈ ನಾಡಿನ ಅನ್ನ ಶ್ರೀಮಂತರ ಸೌಧಗಳಲ್ಲಿ ಪೋಲಾಗುತ್ತಿರುವ ಬಗೆಯನ್ನು ಕವಿ ಇಲ್ಲಿ ತಿಳಿಸಿದ್ದಾರೆ. 'ಹೆಮ್ಮೆಗೆ' ಎಂಬ ಪದವನ್ನು ಉಚ್ಚಾರ ಮಾಡುತ್ತಿರುವಾಗಲೇ 'ಎಮ್ಮೆ' ಎಂಬ ಪದ ನೆನಪಿಗ ಬರುತ್ತದೆ.' ಎಮ್ಮೆ' ಪಶುತ್ವಕ್ಕೆ ಸಂಕೇತ. ತಮ್ಮ ಸಂತೋಷದ ಭರದಲ್ಲಿ ಮಾನವೀಯತೆಯನ್ನು ಕಳೆದುಕೊಂಡು ಪಶುತ್ವವನ್ನು ಧರಿಸಿಕೊಂಡಿರುವ ಶ್ರೀಮಂತರ ಮೃಗಯೀಭಾವವನ್ನು ಈ ಮಾತು ತಿಳಿಸುತ್ತದೆ. ಈ ಶ್ರೀಮಂತರ ಮೃಗತ್ವದ ಪೋಷಣೆಗೆ ಹೊಲಗಳಲ್ಲಿ, ಗಿರಣಿಗಳಲ್ಲಿ ದುಡಿಯುವ ಬಡವ-ದುಡಿಯುವ ವರ್ಗ - ತನ್ನ ಶ್ರಮದ ಫಲವಿಲ್ಲದೆ ಹೊಟ್ಟೆಗಾಗಿ 'ಕೊರಗುವ' ಚಿತ್ರ ಸಹೃದಯನ ಮೇಲೆ ಪ್ರಭಾವಿಸುತ್ತದೆ. ಹೀಗಾಗಿ ಬಡವರ ಕೇರಿಗಳು ಕವಿಗೆ "ಸ್ಮಶಾನ" ದಂತೆ ಕಂಡಿವೆ. 'ಶ್ಮಶಾನ' ಸತ್ತವರನ್ನು ಸುಡುವ ಸ್ಥಳ. ಶ್ರೀಮಂತಿಕೆಯ ದರ್ಪದಿಂದಾಗಿ ಬಡವರ ಕೇರಿಗಳು ಸ್ಮಶಾನವಾಗಿದೆ. ಅಲ್ಲಿನ ಬಡಜನತೆ ಜೀವಂತ ಶವ ಗಳಾಗಿದ್ದಾರೆ. ಬಡವ ಈ ರೀತಿ ಜೀವಂತ ಶವವಾಗಲು ಮೂಲ ಕಾರಣ ಶ್ರೀಮಂತ. ಹೀಗೆ ಬಡವ ಬಲ್ಲಿದರ ನಡುವಿನ ಅಂತರವನ್ನು ಕೊಡುವುದರ ಮೂಲಕ ನಮ್ಮ ಸಮಾಜವನ್ನು ಆಳುತ್ತಿರುವ ಶ್ರೀಮಂತಶಾಹಿಯನ್ನು ಕುವೆಂಪು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ. ಓದುಗನು ತನ್ನ ಸುತ್ತಮುತ್ತಲಿನ ಬದುಕನ್ನು ಮತ್ತೊಮ್ಮೆ ಮಗದೊಮ್ಮೆ ಈ ದೃಷ್ಟಿಯ ಮೂಲಕ

ನೋಡುವಂತೆ, ಆ ಮೂಲಕ ತನ್ನನ್ನು ತಾನು ಪರಿಶೋಧಿಸಿಕೊಳ್ಳುವಂತೆ ಈ ಕವನ ಈ ಹಂತದಲ್ಲಿ ಕೆಲಸ ನಿರ್ವಹಿಸುತ್ತದೆ.

ಕವಿ ಕಂಡ ಈ ಸಾಮಾಜಿಕ ಅಸಮಾನತೆಯನ್ನು ತಿಳಿಸಿದ ಮೇಲೆ ಮುಂದೆ ಅದರಿಂದ ಆಗುವ ಪರಿಣಾಮವನ್ನು ತಿಳಿಸುತ್ತಾರೆ. ಮೇಲಿನ ಪ್ಯಾರದಲ್ಲಿ ನಾವು ಕವಿ ವರ್ಣನೆಯಲ್ಲಿ ಕಂಡದ್ದು ವ್ಯಕ್ತಿ ಪ್ರಜ್ಞೆಯಾಗಿರುವಂತೆ ಸಮೂಹ ಪಜ್ಞೆಯೂ ಆಗಿದೆ. 'ಕೌಪೀನ' ಎಂಬ ಮಾತು ತಂದು ಕೊಡುವ 'ಮಾನ'ದ ನೆನಪಿಗೂ 'ಪೀತಾಂಬರ' ತಂದು ಕೊಡುವ 'ವೈಭವ' ದ ನೆನಪಿಗೂಇರುವ ಅಂತರವೇ ನಮ್ಮ ಸಾಮಾಜಿಕ ಅಸಮಾನತೆಯಾಗಿದೆ. ಕವಿ ಈ ಸಂದರ್ಭದಲ್ಲಿ ಸಮೂಹ ಪ್ರಜ್ಞೆಯನ್ನು ಅಭಿವ್ಯಕ್ತಿಸುವ ರೀತಿ ಮನೋಜ್ಞವಾಗಿದೆ. ಬಡವರ ಮೇಲೆ ನಿರಂತರವಾಗಿ ನಡೆಸುತ್ತಿರುವ ದೌರ್ಜನ್ಯ ಮತ್ತು ಶೋಷಣೆಗಳು ಶ್ರೀಮಂತರನ್ನು ಕಬಳಿಸಿಯೇ ತೀರುತ್ತದಂಬುದನ್ನು ಕವಿ ಮುಂದೆ ಚಿತ್ರಿಸುತ್ತಾರೆ. ಬಡವನೆದೆಯಲ್ಲಿ ನೋವಿದೆ, ರೊಚ್ಚಿನ ಬೆಂಕಿಯಿದೆ. 'ಹಸಿವು' ಮನುಷ್ಯನ ಮೂಲಭೂತ ಪ್ರವೃತ್ತಿ. ಅದು ತೃಪ್ತಿಗೊಳ್ಳದಿದ್ದರೆ ಶೋಷಕನನ್ನೇ ತಿಂದು ನೊಣೆಯುತ್ತದೆ.

ನೋಡುತ ನೋಡುತ ನೋಡುತ್ತಿದ್ದೆ;
ನೋಡುತ್ತಿರೆಯಿರೆ ಬೆಚ್ಚಿಬೆದ್ದೆ;
ಬಡ ಬಗ್ಗರ ಜಠರಾಗ್ನಿಯು ಎದ್ದು
ಗುಡಿಸಲುಗಳಿಗೇ ಬೆಂಕಿಯು ಬಿದ್ದು
ಧಗ ಧಗ ಧಗ ಧಗ ಹೊತ್ತಿದುದು,
ಭುಗಿ ಭುಗಿಲೆನ್ನುತ ಮುತ್ತಿದುದು!
ಮುಗಿಲಿನ ವರೆಗೂ ಬಾನಿನವರೆಗೂ
ದಿಕ್ಕು ದಿಕ್ಕುಗಳ ಜುಟ್ಟನವರೆಗೂ

ಮೇಲಿನ ಸಾಲುಗಳು ಸಾಮಾಜಿಕ ಅಸಮಾನತೆಯಿಂದಾಗುವ ಪರಿಣಾಮ ಕ್ರಿಯೆಯನ್ನು ಹೇಳುತ್ತವೆ. ಕವಿ ನೋಡುತ್ತಿರುವ ಕ್ರಿಯೆ, ವಸ್ತುವಿನ ಕ್ರಿಯೆಯೂ ಆಗುವ ತಂತ್ರ ಚೆನ್ನಾಗಿದೆ. 'ನೋಡುತ ನೋಡುತ ನೋಡುತ್ತಿದ್ದೆ'ಎಂಬಲ್ಲಿನ ನೋಡುವ ಕ್ರಿಯೆಯ ವಿಸ್ತಾರ, ಅರಿವನ್ನು ತಂದು ಕೊಡುವ ಕ್ರಿಯೆಯು ಆಗುವುದರಿಂದ ಕವಿಗೆ ಸಾಮಾಜಿಕ ವಸ್ತುಸ್ಥಿತಿಯ ಅರಿವಾಗಿ ಕವಿ 'ಬೆಚ್ಚಿ'ಬೀಳುತ್ತಾನೆ. 'ಬೆಚ್ಚಿ ಬಿದ್ದೆ'ಎಂಬ ಮಾತಲ್ಲಿ ಅಲ್ಲಿಯವರೆಗ ಕವಿ ಕಂಡಿರಿಯದ ಯಾವುದೋ ಒಂದು ಹೊಸ ಸತ್ಯವನ್ನು -ಭಯಂಕರ ಸತ್ಯವನ್ನು -ಕಂಡಿರುವ ಕ್ರಿಯೆ ಅಡಕವಾಗಿದೆ. ಈ ಕಾಣುವ ಕ್ರಿಯೆ ಅಷ್ಟಕ್ಕೇ ತೃಪ್ತವಾಗದೆ ಮುಂದುವರಿಯುವ ರೀತಿ ಕವಿ ಮಾತಿನಲ್ಲಿ ಅಭಿವ್ಯಕ್ತವಾಗುತ್ತದೆ.ಕವಿ ಮತ್ತೆ ಕಾಣುತ್ತಾನೆ: 'ಬಡಬಗ್ಗರ ಜಠರಾಗ್ನಿಯು ಎದ್ದು ಗುಡಿಸಲುಗಳಿಗೇ ಬೆಕಿಯು ಬಿದ್ದು"ಧಗ ಧಗ ಧಗ ಧಗ' ಉರಿಯುವುದನ್ನು. ಇಲ್ಲಿ ಬಳಸಿರುವ 'ಜಠರಾಗ್ನಿ'ಎಂಬ ಮಾತಿನಲ್ಲಿರುವ ಅರ್ಥಸಾಂಧ್ರತೆಯನ್ನು ಗಮನಿಸಬೇಕು. 'ಜಠರ' ಎಂಬ ಪದದ ಬದಲು 'ಹೊಟ್ಟೆ' ಎಂಬ

ಪದವನ್ನಾಗಲಿ,'ಉದರ' ಎಂಬ ಪದವನ್ನಾಗಲಿ ಬಳಸಿದ್ದರೆ ಈ ಅರ್ಥ ಹೊರಡುತ್ತಿರಲಿಲ್ಲ. 'ಜಠರ' ಎಂಬ ಪದ 'ಹೊಟ್ಟೆ' ಎಂಬ ಅರ್ಥವನ್ನು ಒಳಗೊಂಡು, ಮುಂದುವರಿದು ಯಾವುದೋ ಒಂದು ನಿರ್ದಿಷ್ಟ ಜೀರ್ಣಾಂಗವನ್ನು ಬೆರಳಿಟ್ಟು ತೋರಿಸುತ್ತದೆ. ಹಸಿವಿನ ಅನುಭವ ಬರುವುದು ಈ 'ಜಠರ'ದಿಂದಲೇ. ಹಸಿವಾದಾಗ ಹೊಟ್ಟೆಯಲ್ಲಿ ಉಂಟಾಗುವ ಉರಿ, ಸಂಕಟಗಳು ಅಗ್ನಿಯನ್ನು ಹೋಲುತ್ತವೆ. 'ಬಡಬಗ್ಗರ ಜಠರಾಗ್ನಿಯು ಎದ್ದು 'ಎಂಬ ಮಾತಿನಲ್ಲಿ, ಬಡಬಗ್ಗರ ಹಸಿವಿನ ತಾಳಲಾರದ ಸ್ಥಿತಿಯನ್ನು, ಆ ತಾಳಲಾರದ ಅನಿವಾರ್ಯ ಸಂಕಟದಿಂದ ಉಂಟಾದ ಅವರ ಸಿಡಿತವನ್ನು ಗುರುತಿಸಬಹುದು. ಈ ಮಾತಿನಲ್ಲಿರುವ ಧ್ವನಿ ಸಾಮರ್ಥ್ಯ ಕುವೆಂಪು ಅವರ ಕಾವ್ಯ ಶಕ್ತಿಯನ್ನು ತಿಳಿಸುತ್ತದೆ. ಹಸಿವು ಮಿತಿ ಮೀರಿದಾಗ ಮಾನವನ ಮಿಕ್ಕ ಇಂದ್ರಿಯಗಳು ಮಂಕು ಹಿಡಿಯುತ್ತವೆ. ಆಗ ಅದು ತಾನೇ ತಾನಾಗುತ್ತದೆ. ಈ ತಾನೇ ತಾನಾಗುವ ಕ್ರಿಯೆ ಮಿಕ್ಕವರನ್ನು ಆವರಿಸುವ ಮುನ್ನ ತನ್ನನ್ನೇ ಆವರಿಸುತ್ತದೆಯೆಂಬುದನ್ನು ಕವಿ ಮರೆತಿಲ್ಲ. ಹಸಿವಿನ ಯಜ್ಞಕ್ಕೆ ಬಡವ ತನ್ನನ್ನು ಆಹುತಿ ಮಾಡಿಕೊಳ್ಳುವುದಕ್ಕೂ ಹಿಂಜರಿಯುವುದಿಲ್ಲ. 'ಗುಡಿಸಲುಗಳಿಗೇ ಬೆಂಕಿಯು ಬಿದ್ದು' ಎಂಬಲ್ಲಿನ 'ಗೇ' ದೀರ್ಘ ಮೇಲಿನ ಅಂಶವನ್ನು ಹೊರಹಾಕುತ್ತದೆ. ಬಡವ ತನ್ನನ್ನು ಸುಟ್ಟವರನ್ನು ಸುಡಲು ಹೊರಡುತ್ತಾನೆ.

ಇದು ಯಾವುದೇ ದ್ವೇಷದಿಂದ ಉಂಟಾದ ಕೆರಳಿಕೆಯಾಗದೆ, ತನ್ನ ಮೂಲ ಭೂತ ಹಕ್ಕನ್ನು ಕಸಿದು ಕೊಂಡು ಕಬಳಿಸುತ್ತಿರುವ ಶೋಷಕ ಶಕ್ತಿಯೆದರು ನಡೆಸುವ ಹೋರಾಟವಾಗಿರುತ್ತದೆ. ಬಡವನ ಹಸಿವಿನ ಕೆರಳಿಕೆಯನ್ನು ಕವಿ 'ಬೆಂಕಿ'ಯೊಡನೆ ಸಾಂಕೇತಿಸುತ್ತಾರೆ. ಇಲ್ಲಿ 'ಬೆಂಕಿ' ಬಡವನ ಶಕ್ತಿಯ ಉತ್ತಮ ಪ್ರತಿಮೆಯಾಗಿ ಎಲ್ಲವನ್ನೂ ಆವರಿಸಿಕೊಳ್ಳುತ್ತದೆ. ಆವರಿಸುವ ಕ್ರಿಯೆ ಕವಿ ಮಾತಿನಲ್ಲಿ ಮುಂದೆ ಚಿತ್ರದಂತೆ ಅಭಿನಯಿಸಲ್ಪಡುತ್ತದೆ. ಈ ಅಭಿನಯದಲ್ಲಿರುವ ರೌದ್ರತೆ ಓದುಗನಿಗೆ ತಟ್ಟುತ್ತದೆ. 'ಧಗಧಗ ಧಗ ಧಗ' 'ಭುಗಿ ಭುಗಿಲ್' ಎಂಬ ಅನುಕರಣ ಪದಗಳು ಕುಣಿದಾಡುವ ರೀತಿ ಬೆಂಕಿಯ ರಭಸ ಅರ್ಥಾತ್ ಬಡವನ ಹಸಿವಿನ ತೀವ್ರತೆಯಿಂದುಂಟಾದ ಕರಾಳ ಶಕ್ತಿ ಎಲ್ಲೆಲ್ಲೂ ವ್ಯಾಪಿಸಿಕೊಳ್ಳುವ ಬಗೆಯನ್ನೂ ಧ್ವನಿಸುತ್ತವೆ. ಬಡವನ ಹಸಿವಿನ ಬೆಂಕಿ ಎಲ್ಲವನ್ನೂ ವ್ಯಾಪಿಸಿಕೊಂಡಿತು ಎಂಬುದನ್ನು 'ಮುಗಿಲು' 'ಬಾನು' ದಿಕ್ಕು ಪದಗಳನ್ನು ಬಳಸಿ ಕವಿ ಗಡಿಯನ್ನು ನಿರ್ಮಿಸುತ್ತಾರೆ. ಈ ಗಡಿಯಾಚೆ ಯಾರೂ ತಪ್ಪಿಸಿಕೊಂಡು ಹೋಗಲು ಸಾಧ್ಯವಿಲ್ಲ. ಈ ಯಜ್ಞದಲ್ಲಿ ಸಂಬಂಧ ಪಟ್ಟವರೂ ಪಡದವರೂ ಎಲ್ಲರೂ ಬಲಿಯಾಗಬೇಕು.

ಎಲ್ಲೆಲ್ಲೂ ವ್ಯಾಪಿಸಿದ 'ಬೆಂಕಿ' ಮುಂದೆಗೈದ ಕೃತ್ಯವನ್ನು ಕವಿ ರೋಚಕವಾಗಿ ಚಿತ್ರಿಸುತ್ತಾರೆ. ಕುವೆಂಪು ಅವರ ಸರಳ ಬರವಣಿಗೆಯಲ್ಲಿರುವ ಈ ಸಂಕೀರ್ಣತೆ ಎಂಥವರ ಎದೆಯನ್ನು ನಡುಗಿಸುವಂಥದು. ವೇಗದಲಯ ವಸ್ತುವನ್ನು ತೀವ್ರಗೊಳಿಸುವ ರೀತಿಯೇ ಸಮಸ್ಯೆಯ ಪ್ರಗಾಢತೆಯನ್ನು ಸಹೃದಯನ ಮುಂದಿಡುತ್ತದೆ.

ಬಡವರ ಬೆಂಕಿಯ ನಾಲಗೆ ಚಾಚಿ
ಶ್ರೀಮಂತರನಪ್ಪಿತು ಬಾಚಿ !

ಬಡಬಾಗ್ನಿಯೆ ತಲೆತಗ್ಗಿತು ನಾಚಿ !
ಶ್ರೀಮಂತರ ಸೌಧಂಗಳ ನೆತ್ತಿ
ಸೀದುದು ಬಡ ಹೊಟ್ಟೆಯ ಉರಿಹೊತ್ತಿ !
ದೂರದ ಆ ಗಿರಿಶಿಖರದ ಮೇಲೆ
ನನಗೂ ತಟ್ಟಿತು ಬೆಂಕಿಯ ಜ್ವಾಲೆ !

'ಬಡವರ ಬೆಂಕಿ' ಅಂದರೆ 'ಜಠರಾಗ್ನಿ'ಯ ನಾಲಗೆ "ಶ್ರೀಮಂತರನಪ್ಪಿತು ಬಾಚಿ" ಎಂದು ಕವಿ ಹೇಳುತ್ತಾರೆ. ಬಡವರ ಇಂದಿನ ಎಲ್ಲ ದುಸ್ಥಿತಿಗಳಿಗೂ ಶ್ರೀಮಂತನೇ ಮೂಲ ಆತನಿಂದಲೇ 'ಜಠರಾಗ್ನಿಯ' ಜನನವಾಗಿದೆ. ಅದು ತನ್ನ ಮೂಲ .ಗುರಿಯನ್ನಾಗಿ ಶ್ರೀಮಂತನನ್ನು ಮಾಡಿಕೊಂಡಿದೆ. ಕವಿ ಬಡವರ ಸಿಟ್ಟನ್ನು 'ಪಿಶಾಚಿ'ಗೆ ಹೋಲಿಸುತ್ತಾರೆ. ಬಡವ ಸೊರಗಿದವನು, ಆತನಿಗೆ ಸಿಟ್ಟು ಬರುವುದು ಅಪರೂಪ, ಬಂದರೆ'ಪಿಶಾಚಿ'ಯಂತೆ ಎಲ್ಲರನ್ನೂ ಕಾಡುತ್ತಾನೆಯೆಂಬುದು ಇದರ ಅರ್ಥ. 'ಪಿಶಾಚಿ' ಅತೃಪ್ತ ಜೀವನದ ಸಂಕೇತ. ಬಡವರು ಆತೃಪ್ತರು. ಅತೃಪ್ತತೆ ಅನೇಕ ವಿಕಾರಗಳನ್ನು ತಾಳಿ ಧ್ವಂಸಕೃತ್ಯಕ್ಕೆ ತೊಡಗುತ್ತದೆ. ಆ ಮೂಲಕ ತನ್ನ ಸೇಡನ್ನು ತೀರಿಸಿಕೊಂಡು ತೃಪ್ತವಾಗಲು ಹೆಣಗುವ ಬಡವನ ಸ್ಥಿತಿಯನ್ನು ಕವಿ ಇಲ್ಲಿ ಹೇಳಿದ್ದಾರೆ. ಸಾಮೂಹಿಕ ಬಲಿಯಿಂದ ಹೊಸದೊಂದರ ಉದಯ ಖಂಡಿತ ಆಗೇ ಆಗುತ್ತದೆಯೆಂಬುದು ಕವಿತೆಯಲ್ಲಿ ಸೂಕ್ಷ್ಮವಾಗಿರುವುದು ಗೋಚರಿಸುತ್ತದೆ. ಬಡವರ ಸಿಟ್ಟಿನ ಆ ಜ್ವಾಲೆಯನ್ನು ಕಂಡು ಒಡಬಾಗ್ನಿ ನಾಚಿತು ಎಂದು ಕವಿ ಬರೆಯುತ್ತಾರೆ. 'ಬಡಬಾಗ್ನಿ, ಸಮುದ್ರದಲ್ಲಿ ಹುಟ್ಟುವ ಬೆಂಕಿ. ಎಲ್ಲ ಕಿಚ್ಚುಗಳಿಗಿಂತಲೂ ಭಯಂಕರವಾದುದು. ಅಂಥ ಭಯಂಕರ ಕಿಚ್ಚೇ ನಾಚಿತು ಎಂದು ಕವಿ ಹೇಳುವ ಮಾತಿನಲ್ಲಿ ಬಡವರಿಗಾಗಿರುವ ಅನ್ಯಾಯ ಅವರು ಅನುಭವಿಸಿರುವ ಸಂಕಟ ನೋವುಗಳು ಎಷ್ಟು ತೀಕ್ಷ್ಣತರವಾಗಿದ್ದವು ಎಂಬುದು ಅರ್ಥವಾಗುತ್ತದೆ. ಇಂಥ 'ಬಡಹೊಟ್ಟೆಯುರಿ' ಶ್ರೀಮಂತರ ಸೌಧಗಳ ನೆತ್ತಿಯವರೆಗೆ ವ್ಯಾಪಿಸಿ ಎಲ್ಲವನ್ನು 'ಸೀದುದು'. ಸೀದು' ಎಂಬ ಗ್ರಾಮ್ಯ ಪದ ಇಲ್ಲಿ ತುಂಬ ಅರ್ಥಪೂರ್ಣತೆಯನ್ನು ಪಡೆದುಕೊಳ್ಳುತ್ತದೆ. ಬೆಂಕಿಯ ಕ್ರಿಯೆಯೇ ಸೀಯುವಿಕೆ.

ವಾಸ್ತವ ಬದುಕಿನ ಅರಿವಿನಿಂದ ಇಲ್ಲಿಯವರೆಗೆ ದೂರನಿಂತಿದ್ದ ಕವಿಗೆ ಪರಿಸ್ಥಿತಿಯ ಕಾವು ತಟ್ಟಿತು ಎಂಬುದನ್ನು ಮುಂದೆ ಕವನ ಹೇಳುತ್ತದೆ. 'ನನಗೂ ತಟ್ಟಿತು ಬೆಂಕಿಯ ಜ್ವಾಲೆ' ಎಂಬ ಮಾತಿನಲ್ಲಿ ಪರಿಸ್ಥಿತಿಯಿಂದ ಯಾರೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ; ಎಲ್ಲರೂ ಅನುಭವಿಸಲೇಬೇಕೆಂಬ ಧ್ವನಿ ಹೊರಡುತ್ತದೆ. ಇಲ್ಲಿ ಪಲಾಯನಕ್ಕೆ ಅಸ್ಪದವಿಲ್ಲ. ಕವಿ ನಿಂತಿರುವುದು 'ಗಿರಿಶಿಖರದ ಮೇಲೆ'. ಈ ಗಿರಿಶಿಖರ 'ದೂರದಲ್ಲಿದೆ', ಎತ್ತರದಲ್ಲಿದೆ. ಆದರ ಎತ್ತರ ಎಷ್ಟು ಎಂಬುದನ್ನು ಹಿಂದಿನ ಚರಣಗಳ 'ಹತ್ತೀ ಹತ್ತೀ' ಕ್ರಿಯೆಯಲ್ಲಿ ಕಂಡಿದ್ದೇವೆ. ಗಿರಿಶಿಖರದಿಂದ ಪಲಾಯನ ಮಾಡಲೆತ್ನಿಸುವುದು ಸಾವನ್ನು ಸ್ವಾಗತಿಸುವುದೆಂದೇ ಅರ್ಥ. ಆದ್ದರಿಂದ 'ತಟ್ಟುವ' ಬೆಂಕಿಯ ಜ್ವಾಲೆಗೆ ಈಡಾಗಲೇ

ಬೇಕು. ಇಂದಿನ ಈ ಪರಿಸ್ಥಿತಿಗೆ ಕವಿಯೂ ಕಾರಣನಾಗಿದ್ದಾನೆ ಪರಿಸ್ಥಿತಿಗೆ ಇದುವರೆಗೆ ಕಣ್ಮುಚ್ಚಿ, ಕೂತು, ಅದು ಪರಾಕಾಷ್ಠೆ ಮುಟ್ಟುವಂತೆ ಮಾಡಿದ್ದಾನೆ. ಶ್ರೀಮಂತರ ದೌರ್ಜನ್ಯವನ್ನು ತನ್ನ ಹರಿತವಾದ ಲೇಖನಿಯಿಂದ ಖಂಡಿಸುವುದರ ಬದಲು 'ಗಿರಿಶಿಖರ'ದ ಮೇಲೆ ನಿಂತಿದ್ದಾನೆ. ಶೋಷಕತನದಲ್ಲಿ ಅವನೂ ಪಾಲುಗೊಂಡಿರು ವುದರಿಂದ ಇಂದಿನ ಪರಿಸ್ಥಿತಿಯಿಂದ ತಪ್ಪಿಸಿ ಕೊಳ್ಳುವುದು ಆಗದ ಮಾತಾಗಿದೆ.

ಬಡವರ ಸಿಟ್ಟಿನ ಪರಿಣಾಮ ಎಲ್ಲ ಕಡೆ ವ್ಯಾಪಿಸುತ್ತದೆ. ಎಲ್ಲೆಲ್ಲೂ ಕವಿಗೆ 'ಚೀತ್ಕಾರ' 'ಹಾಹಾಕಾರ'ಗಳು ಕೇಳಿಸುತ್ತಿವೆ. ಕುವೆಂಪು ಈ ಚೀತ್ಕಾರತೆಯ ಭೀಕರತೆಯನ್ನು ಪ್ರಭಾವಯುತವಾಗಿ ಚಿತ್ರಿಸುತ್ತಾರೆ. ಬಡವರ ಈ ಜಠರಾಗ್ನಿಗೆ ಮಕ್ಕಳು ಮರಿಗಳು, ಸ್ತ್ರೀಯರು ಮುದುಕರು, ಕುಂಟರು, ಕಿವುಡರು ಎಂಬ ಭೇದವಿಲ್ಲ, ಎಲ್ಲರನ್ನೂ ಅವರಿಸಿ ನುಂಗುತ್ತದೆ. ಕವನದ ಈ ಹಂತದ ಲಯ 'ಕಿಂದರ ಜೋಗಿ'ಯನ್ನು ನೆನಪಿಗೆ ತರುತ್ತದೆ. ಲಯವೇ ವಸ್ತುವನ್ನು ಹೆಚ್ಚು ಪರಿಣಾಮಕಾರಿಯಾಗುವಂತೆ ಮಾಡುತ್ತದೆ.

ಬಡವರ ಗೋಳನು ಕೇಳದ ಕಿವುಡರು;
ಹೊಟ್ಟೆಲು ಪಾಡಿಗೆ ಕಾವಿಯನುಟ್ಟು
ಬಡವರ ಹಸಿವೆಗೆ ಮೌಢ್ಯವ ಕೊಟ್ಟು
ಸುಖ ಸಂಪತ್ತನು ಕೊಂಡವರು,
ಮೃಷ್ಟಾನ್ನವನೇ ಉಂಡವರು;
ಗುರುಗಳು ಶಿಷ್ಯರು ಮನೆಗಳು ಮಠಗಳು
ಎಲ್ಲರೂ ಬೆಂದರು ಬಡವರಾಗ್ನಿಯಲಿ[4]
ಬಡವರ ಬಗ್ಗರ ಜಠರಾಗ್ನಿಯಲ್ಲಿ!
ಬಡವನ ಜಠರಾಗ್ನಿಯ ಬಡಬಾಗ್ನಿ
ಬಡವನೆ ಕಲಿಯುಗದಂತ್ಯದ ಕಲ್ಕಿ!

ಕುವೆಂಪು ಅವರು ಈ ಹಂತದಲ್ಲಿ ಬಡವರನ್ನು ಶೋಷಿಸಿರುವ ನಮ್ಮ ಸಮಾಜದ ಮತ್ತೊಂದು ಮಹಾ ಪಿಡುಗಾದ ಮತಮೌಢ್ಯ ಜನಕರನ್ನು ಕುರಿತು ಹೇಳುತ್ತಾರೆ. ಈ ಕಾವಿಯನ್ನುಟ್ಟ ಜನ ಎಂದೂ ಬಡವರ ಗೋಳನ್ನು ಕೇಳದವರು. ನಮ್ಮ ಸಮಾಜದಲ್ಲೇ ಏಕೆ, ಯಾವುದೇ ಸಮಾಜದಲ್ಲಿ ಪುರೋಹಿತವರ್ಗ, ಶ್ರೀಮಂತವರ್ಗ ಮತ್ತು ಆಳುವ ವರ್ಗದೊಡನೆ ಶಾಮಿಲಾಗಿ

4. 'ಪಾಂಚಜನ್ಯ'ಕವನ ಸಂಕಲನದ 'ಇಂದಿನ ದೇವರು'ಕವನವನ್ನು ಈ ಸಂದರ್ಭಕ್ಕೆ ಹೋಲಿಸಿ ನೋಡಬಹುದು. ಇಲ್ಲಿ ಅದರ ಒಂದು ಪ್ಯಾರಾವನ್ನು ಉದಾಹರಣೆಗೆ ಕೊಟ್ಟದ್ದೇನೆ.

ಬಡವರನ್ನು ಶೋಷಣೆ ಮಾಡುತ್ತಿರುತ್ತಾರೆ. ಈ ವಸ್ತುಸಂಗತಿಯನ್ನು ಫ್ರಾನ್ಸ್ ಮತ್ತು ರಷ್ಯಾ ಚರಿತ್ರೆಯನ್ನು ನೋಡಿದರೆ ತಿಳಿಯುತ್ತದೆ. ಇಂಥ ಜನಕ್ಕೆ ಎಂದಿಗೂ ನೈತಿಕ ಜವಾಬ್ದಾರಿ ಯೆಂಬುದಿರುವುದಿಲ್ಲ. ಇಲ್ಲಿ ಕವಿ ಇಂಥ ಜನರನ್ನು ವಿಡಂಬಿಸುತ್ತಾರೆ. 'ಬಡವರ ಹಸಿವೆ'ಗೆ ಬೇಕಾಗಿರುವುದು ಮುಖ್ಯವಾಗಿ ಅನ್ನ. ಆದರೆ ಈ ಜನ ಕೊಟ್ಟದ್ದು ಮೌಢ್ಯ! ಈ ಮಾತಿನಲ್ಲಿ ಇಡೀ ಭಾರತೀಯ ಸಾಮಾಜಿಕ ವಿಕಾಸದ ಗತಿಯೇ ನಿಂತಿದೆ. ನೂರೆಂಟು ದೇವರುಗಳನ್ನು ಸೃಷ್ಟಿಸಿ, ನೂರೆಂಟು ಮತಗಳನ್ನು ಚಲಾವಣೆಗೆ ತಂದು ಈ ಜನ ಸಾಧಿಸಿದ್ದಾದರೂ ಏನು? ಕೇವಲ ಮೌಢ್ಯ! ಮತ್ತೆ ಮತ್ತೆ ಜನರು ಅಜ್ಞಾನದಲ್ಲಿ ನರಳಲು ಬಿಟ್ಟು ತಾವು ಸುಖ ಸಂಪತ್ತಿನಲ್ಲಿ ಲೋಲಾಡುತ್ತ 'ಮೃಷ್ಟಾನ್ನವನ್ನೇ' ಉಂಡಂಥ ಜನ ಇವರು. ಕವಿ ಇಲ್ಲಿ 'ಮೃಷ್ಟಾನ್ನ, ಪದವನ್ನು ಬುದ್ಧಿವಂತಿಕೆಯಿಂದ ಬಳಸಿದ್ದಾರೆ. ಅನ್ನ ಅನಿವಾರ್ಯ ಬೇಡಿಕೆಯಾದರೆ, 'ಮೃಷ್ಟಾನ್ನ' ವೈಭವದ ಭೋಜ್ಯ ವಸ್ತು. ಅನ್ನವೇ ಸಿಗದೇ ಹಸಿವಿನಿಂದ ನರಳುತ್ತಿರುವ ಮಂದಿಯನ್ನು ಸುಲಿದು ತಾವು ತಿಂದು ತೇಗಿದ ಜನ ಇವರು. ಇಂಥವರನ್ನು ಬಡವರು ಸುಮ್ಮನೆ ಬಿಡುವುದಿಲ್ಲ. ಬಡವರ ಜಠಾರಾಗ್ನಿಯಲ್ಲಿ ಈ ಗುರುಗಳು ಶಿಷ್ಯರು ಅವರ "ಮನೆಗಳು" "ಮಠಗಳು" ಎಲ್ಲವೂ ಬೆಂದು ಹೋಗುತ್ತವೆ. ಮುಂದೆ ಕವಿ 'ಬಡಬಾಗ್ನಿ' ಮತ್ತು "ಜಠರಾಗ್ನಿ"ಯನ್ನು ಸಮೀಕರಿಸುತ್ತಾರೆ. ಈ ಮೊದಲು 'ಬಡಬಾಗ್ನಿ' ಕೇವಲ ಹೋಲಿಕೆಯಾಗಿ ಜೊತೆಜೊತೆಯಾಗಿ ಹರಿದು ಬಂದದ್ದು, ಇಲ್ಲಿ 'ಜಠರಾಗ್ನಿ'ಯ ಜೊತೆ ಮಿಲನವಾಗಿ, ಶಕ್ತಿ ಸಂವರ್ಧನೆಗೊಳಿಸಿ ಎಲ್ಲರನ್ನು ತಿನ್ನುವ ಕ್ರಿಯೆಗೆ ಸಹಾಯಕವಾಗುತ್ತದೆ. ಆದರೆ ಕವಿಯೇ ಅದನ್ನು 'ಬಡವರ ಜಠರಾಗ್ನಿಯೆ ಬಡಬಾಗ್ನಿ'ಎಂದು ವಾಚ್ಯಗೊಳಿಸುವ ಅವಶ್ಯಕತೆಯರಲಿಲ್ಲ. ಏಕೆಂದರೆ ಸಹೃದಯ ಈಗಾಗಲೇ 'ಬಡಬಾಗ್ನಿ' ಮತ್ತು 'ಜಠರಾಗ್ನಿ'ಯನ್ನು ಜೊತೆಜೊತೆಯಾಗಿ ಸ್ವೀಕರಿಸಿರುತ್ತಾನೆ.

ಮೇಲಿನ ವಿಶ್ಲೇಷಣೆಯಿಂದ ಬಡವರ ಕ್ರೋಧ ನಡೆಸುವ ಸಮಗ್ರ ಕ್ರಾಂತಿಯ ಅರಿವಾಗುತ್ತದೆ. ಜೊತೆಗೆ ಇದಕ್ಕೆಲ್ಲಕ್ಕೂ ಮೂಲಕಾರಣವಾದ ನಮ್ಮ ಸಾಮಾಜಿಕ ಅಸಮಾನತೆ. ಈ ಅಸಮಾನತೆಗೆ ಮೂಲಕಾರಣಕರ್ತರಾದ ಶ್ರೀಮಂತರು. ಕಾವಿಯುಟ್ಟ ಜನರು ಇವರ ವಾಸ್ತವ ಚಿತ್ರ ಸಿಗುತ್ತದೆ. ಅನಂತರ ಬಡವನ ಹಸಿವು ತಾಳ್ಮೆಗೆಟ್ಟು ನಡೆಸುವ ದಹನಕ್ರಿಯೆಯನ್ನು ಕವನ ಅದ್ಭುತವಾಗಿ. ತೀವ್ರವಾಗಿ ಚಿತ್ರಿಸುವ ರೀತಿಯನ್ನು ನೋಡಿದ್ದೇವೆ.

ಮುಂದೆ ಕವಿ 'ಕಲ್ಕಿ'ಯ ಹೆಸರನ್ನು ತರುತ್ತಾರೆ. 'ಕಲ್ಕಿ'ಯ ಕಲ್ಪನೆಯಿಂದ ಕವನದ ದೃಶ್ಯವೇ ಬದಲಾಗುತ್ತದೆ, ಕುವೆಂಪು ಅವರ ಕಲ್ಪನೆಯ ಪ್ರಕಾರ ಕಲ್ಕಿ ಕೃಷ್ಣನ ಅವತಾರವಲ್ಲ.'ಕಲ್ಕಿ' ಹೊರಗಿನ

---

ಗುಡಿಯೊಳಗೆ ಕಣ್ ಮುಚ್ಚಿ ಬೆಚ್ಚಗಿರುವರನೆಲ್ಲ,
ಭಕ್ತ ರಕ್ತವ ಹೀರಿ ಕೊಬ್ಬಿಹರನೆಲ್ಲ,
ಗಂಟೆ ಜಾಗಟೆಗಳಿಂ ಬಡಿದು, ಕುತ್ತಿಗೆ ಹಿಡಿದು
ಕಡಲಡಿಗೆ ತಳ್ಳಿರೈ ಶಂಖದಿಂ ನುಡಿದು !
—ಪಾಂಚಜನ್ಯ, ಪುಟ ೩೯ (ಐದನೆಯ ಮುದ್ರಣ ೧೯೩೯)

ವ್ಯಕ್ತಿಯಲ್ಲ, ಇಲ್ಲಿಯವನೇ, ಈ ಬದುಕಿನವನೇ. ಈ ಬದುಕಿನ ಅಸಮಾನತೆಯನ್ನು ತೊಲಗಿಸಲು ಸಿಡಿದುನಿಂತ ಭೀಕರ ಬಡವನೇ 'ಕಲ್ಕಿ'. ಬಡವನೆ ಕಲಿಯುಗದಂತ್ಯದ ಕಲ್ಕಿ, ಎಂದು ಕವಿ ಹೇಳುತ್ತಾರೆ. ಇಲ್ಲಿ ಸಮತಾವಾದದ ಛಾಯೆ ಎದ್ದು ಕಾಣುತ್ತದೆ. ಬಡವನೇ, ದುಡಿಯುವ ವ್ಯಕ್ತಿಯೇ ಈ ಜಗತ್ತನ್ನು ಆಳಬಲ್ಲಂಥವನು, ಅವನೇ ಎಲ್ಲದಕ್ಕೂ ಒಡೆಯ. ಏಕೆಂದರೆ ಎಲ್ಲವೂ ಅವನಿಂದಲೇ ಸೃಷ್ಟಿಗೊಂಡಿರುತ್ತದೆ ಎಂಬ ತತ್ವ ಇಲ್ಲಿದೆ. 'ಕಲಿಯುಗದಂತ್ಯದ ಕಲ್ಕಿ' ಬಡವನಾಗಿರುವುದು, ಬಡವನಿಗೆ ತಂದು ಕೊಟ್ಟಿರುವ ಗೌರವ. 'ಕಲ್ಕಿ' ಎಂಬ ಹೆಸರಿಗೆ ಇರುವ ಪೌರಾಣಿಕತ್ವಕ್ಕೂ ಕುವೆಂಪು ಅವರ ಕಲ್ಪನೆಗೂ ಅಂತರವಿದ್ದು, ಕುವೆಂಪು ಕಲ್ಪನೆ ಹೆಚ್ಚು ಸಕಾಲಿಕವೂ ಮಹತ್ವವೂ ಆಗುತ್ತದೆ. ಕವನದ ಈ ಘಟ್ಟದಲ್ಲಿ 'ಕಲ್ಕಿ' ಯನ್ನು ಯಾರಿರಬಹುದೆಂದು ಕವಿ ಊಹಿಸುತ್ತಾರೆ. ಮುಂದೆ ಆ ಊಹೆ ನಿಜವಾಗುವಂತೆ 'ಕಲ್ಕಿ'ಯ ಉದಯವಾಗುತ್ತದೆ. ಅವನ ಉದಯವೇ ಭೀಕರವಾಗಿದ್ದು, ನಮ್ಮ ಪುರಾಣ ಕಲ್ಪನೆಯನ್ನು ಮೀರಿಸುವಂತಿದೆ. ಆ ಭೀಕರತೆಯ ಮುನ್ಸೂಚನೆಯಂತೆ ಕವನ ಮುಂದೆ ತೆಗೆದುಕೊಳ್ಳುವ ತಿರುವು ಅಸಾಧಾರಣವಾಗಿದೆ.

ಕವನ ಇಲ್ಲಿಂದ ಮುಂದೆ ದೃಶ್ಯದಿಂದ ದೃಶ್ಯಕ್ಕೆ ನೆಗೆಯುತ್ತದೆ. ಮುಂದೆ ಕವಿ ವರ್ಣಿಸುವ ದೃಶ್ಯ ನೆನೆಯಲು ಆಗದಷ್ಟು ಭೀಭತ್ಸವಾಗಿದ್ದು, ಹೃದಯವನ್ನು ನಡುಗಿಸುತ್ತದೆ. ಕವಿಯ ಕಣ್ಮುಂದೆ ಎಲ್ಲವೂ ಜರುಗುತ್ತದೆ. ಕವಿ ಎಲ್ಲವನ್ನೂ ಕೇವಲ ದೃಷ್ಟಿಕೋನ(Point of view) ವಾಗಿ ಮಾತ್ರ ನೋಡದೆ, ಈ ಹಂತದಲ್ಲಿ ಸ್ವತಃ ಅದರ ಬೇಗೆಯನ್ನು ಅನುಭವಿಸುತ್ತಿದ್ದಾನೆ. ಇದರಿಂದ ಕವಿ ವಸ್ತುವಿನ ಒಂದು ಪಾತ್ರವಾಗಿ ಬೆರೆತುಹೊಗುತ್ತಾನೆ. ವಸ್ತು ಮತ್ತು ಕವಿಯಲ್ಲಿರುವ ಈ ತರತಮ ಬೆಸುಗೆಯಿಂದಾಗಿ ಕವನ ಓದುಗನ ಮೇಲೆ ಪ್ರತಿಕ್ಷಣದ್ಲಲ್ಲೂ ಉದ್ವೇಗವನ್ನು ಹುಟ್ಟಿಸುತ್ತದೆ. ಕವಿಯ ನೋಡುವ ಕ್ರಿಯೆ ಮುಂದುವರಿಯುತ್ತದೆ. 'ನೋಡುತಲಿದ್ದೆ ನೋಡುತ್ತಲಿದ್ದೆ' ಎಂಬಲ್ಲಿರುವ ಆಶ್ಚರ್ಯವನ್ನು ಗಮನಿಸಬೇಕು. ನೋಡುತ್ತ ನೋಡುತಿದ್ದಂತೆಯೇ ಮೊದಲಿದ್ದ ಬೆಂಕಿಯ ದೃಶ್ಯ ಕಾಣೆಯಾಗಿದೆ. ಮತ್ತೊಂದು ದೃಶ್ಯ ಪ್ರತ್ಯಕ್ಷವಾಗಿದೆ. 'ಏನಿದು ಈ ದೃಶ್ಯ?' ಕವಿಯ ಮುಂದೆ ಪ್ರಶ್ನೆ ಬೆಳೆಯುತ್ತದೆ. ಈ ಪ್ರಶ್ನೆಯ ಜೊತೆಗೆ ಬೆರಗೂ ಸೇರಿಕೊಂಡಿರುವುದರಿಂದ ಕವಿಗೆ ಏನೋ ಭೀಕರವಾದದ್ದು ವಿಶೇಷವಾದದ್ದು ಕಂಡಿದೆಯೆಂದು ಓದುಗನ ಗಮನಕ್ಕೆ ಬರುತ್ತದೆ. ಕವಿ ಇಲ್ಲಿ 'ಏನಿದು ಈ ದೃಶ್ಯ?' ಎಂದು ಹೇಳುವಲ್ಲಿಯೇ ಪರಿಸ್ಥಿತಿಯ ಮಾರ್ಪಾಡನ್ನು ಪದಗಳಲ್ಲಿ ಅಭಿನಯಿಸಿ ತೋರುತ್ತಾರೆ. ಹೀಗೆ ಭಾವಕ್ಕೆ ತಕ್ಕಂತೆ ಭಾಷೆಯನ್ನು ದುಡಿಸುವುದನ್ನು ಈ ಕವನದ ಉದ್ದಕ್ಕೂ ಕಾಣುತ್ತಾ ಹೋಗಬಹುದು.

ರಕ್ತದ ಜಲಪಾತ!
ನರ ಮಾಂಸದ ನಾತ!
ಧುಮುಧುಮಕುತಲಿದೆ ರಕ್ತದ ರಣಧುನಿ!
ಹೊರಹೊಮ್ಮುತ್ತಿದೆ ನರರಾರ್ತಧ್ವನಿ!

ಗಗನವು ರಕ್ತ! ಭೂಮಿಯು ರಕ್ತ
ನೋಡಿದರೆತ್ತಲು ರಕ್ತ! ರಕ್ತ!
ಅಯ್ಯೋ ರಕ್ತ!

ಕವಿ ಕನಸನ್ನು ಕಾಣುತ್ತಿರುವ ಕ್ರಿಯೆ ಸಾಗಿದೆ. ಕನಸಿನಲ್ಲಿ ಒಂದಕ್ಕೊಂದು ಅಸಂಬದ್ಧವಾದ ಪ್ರಸಂಗಗಳು ಬೇಕಾದರೆ ಗೋಚರಿಸಬಹುದು. ಆದರೆ ಆ ಅಸಂಬದ್ಧತೆಯಲ್ಲೂ ಯಾವುದೋ ಒಂದು ಸಾಂಗತ್ಯದ ಎಳೆ ಎಣೆದುಕೊಂಡಿರುತ್ತದೆ. ಕವಿ ಕನಸಿನಲ್ಲಿ ಮುಂದುವರಿದು ಕಂಡ ಹೊಸ ದೃಶ್ಯಕ್ಕೂ ಹಳೆಯ ದೃಶ್ಯಕ್ಕೂ ನೇರ ಸಂಬಂಧವಿದೆ. ಬೆಂಕಿ ಶ್ರೀಮಂತರನ್ನು ತರಿದೊಟ್ಟಿದೆ. ಅದರಿಂದುಂಟಾದ ದೃಶ್ಯ ಮೈಜುಮ್ಮೆನ್ನಿಸುವಂತೆ ಓದುಗನ ಮುಂದೆ ಕಾಣುತ್ತದೆ. ರಕ್ತದ ಜಲಪಾತ ಬೀಳುತ್ತಿದೆ, ಎಲ್ಲೆಲ್ಲೂ ನರ ಮಾಂಸದ ನಾತವೇ ಬಡಿಯುತ್ತಿದೆ. ಕವಿ ಮುಂದೆ 'ರಕ್ತದ ರಣಧುನಿ' ಎಂಬ ಮಾತನ್ನೂ ಬಳಸುತ್ತಾರೆ. ರಕ್ತದ ರಣಭೇರಿಯೇ ಮೊಳಗಿತು ಎಂದು ಹೇಳುವಲ್ಲಿ ಬಡವರ ಕ್ರೋಧದ ಪರಾಕಾಷ್ಠೆಯನ್ನು ಗುರುತಿಸಬಹುದು. ಎಲ್ಲವೂ ರಕ್ತಮಯವಾಗಿತ್ತು ಎಂಬುದನ್ನು, ಪದಗಳನ್ನೇ 'ರಕ್ತ'ಮಯ ಮಾಡಿ ಎಣೆದು ಕವಿ ತೋರಿದ್ದಾರೆ 'ಅಯ್ಯೋ ರಕ್ತ'ಎನ್ನುವಲ್ಲಿರುವ ಕವಿಯ ಆರ್ತನಾದ ರಕ್ತ ವ್ಯಾಪ್ತಿಯನ್ನು ಹೇಳುತ್ತದೆ. 'ರಕ್ತ' ಅನೇಕ ವೇಳೆ ಅಸಹ್ಯವನ್ನು ಹೆದರಿಕೆ ಯನ್ನು ಹುಟ್ಟಿಸುವಂಥ ವಸ್ತು. ಭೂಮ್ಯಾಕಾಶವನ್ನು ವ್ಯಾಪಿಸುವ 'ರಕ್ತ' ಕವಿಯಲ್ಲಿ ತರುವ ಭೀಭತ್ಸತೆಯನ್ನೇ ಓದುಗನಲ್ಲೂ ಉಂಟು ಮಾಡುತ್ತದೆ.

ರಕ್ತ ಬರಬೇಕಾದರೆ ಶ್ರೀಮಂತರ ಕೊಲೆ ನಡೆದಿರಬೇಕು. ಅದನ್ನು ಕವಿ ನೇರವಾಗಿ ಹೇಳದೆ ಎಲ್ಲವನ್ನೂ ಪ್ರತಿಮಾತ್ಮಕವಾಗಿ ಹೇಳುತ್ತಾರೆ. 'ರಕ್ತ' ಕ್ರಾಂತಿಗೆ ಸಂಕೇತ. ಬಡವರ ಹೃದಯದಲ್ಲಿ ಮೂಡಿರುವ ಕ್ರಾಂತಿಯದಾರಿಗೆ ಅಡ್ಡ ಬಂದ ಎಲ್ಲರನ್ನು ಆಕ್ರಮಿಸುತ್ತಿದೆ. ಈ ಹಂತದಲ್ಲಿ ಕವನ ಫ್ರಾನ್ಸಿನ ಕ್ರಾಂತಿಯನ್ನು ನೆನಪಿಗೆ ತರುತ್ತದೆ. ಬಡವರ ಅದುಮಿಟ್ಟ ಕೋಪ ಭುಗಿಲೆದ್ದು ಸೇಡು ತೀರಿಸಿಕೊಂಡ ನಂತರ ಆದ ಪರಿಣಾಮ ಇಲ್ಲಿ ಕಣ್ಮುಂದೆ ದೃಶ್ಯವನ್ನು ಬಿಚ್ಚಿ ಹೇಳುತ್ತದೆ. ಪ್ರಕೃತಿಯೂ ಕೂಡ ಇಲ್ಲಿ ಭಯಾನಕವಾಗಿದೆ 'ಶೋಣಿತ'ಎಂಬ ಪದವನ್ನು 'ರಕ್ತ' ಎಂಬ ಪದದ ಬದಲು ಬಳಸುವುದರಿಂದ ಪ್ರಕೃತಿಯ ಪರಿವರ್ತನೆಯನ್ನು ಹಿಡಿದಿಟ್ಟಂತಾಗುತ್ತದೆ. ಗಿರಿಝುರಿಗಳಲ್ಲಿ ನೀರಲ್ಲ ಧುಮುಕುತ್ತಿದ್ದುದು 'ಶೋಣಿತ'. ಈ ಝುರಿಯಲ್ಲಿ ನೆತ್ತರ ಬೀಳದಲ್ಲಿ 'ನರ ರುಂಡಗಳು ನರಮುಂಡಗಳು' ಧುಮುಕುತ್ತಲಿವೆ. ಕವಿ ಅದನ್ನು ಒಂದು ಹೋಲಿಕೆಯೊಡನೆ ಹೇಳುತ್ತಾರೆ. 'ಮುಂಗಾರ್ಗಾಲದ ಬಲ್ಸರಿಯಲ್ಲಿ ಆಲಿಯ ಕಲ್ಲುಗಳುರುಳುರುಳ್ವಂತೆ "ಮುಂಗಾರ್ಗಾಲದ ಬಲ್ಸರಿ' ಹರಿಯುತ್ತಾ ಧುಮುಕುತ್ತಿರುವ ರಕ್ತದ ತೀವ್ರತೆಯನ್ನು ತಂದು ಕೊಡುತ್ತದೆ. ಇಲ್ಲಿನ 'ಬಲ್ಸರಿ'ಎಂಬ ಪ್ರಯೋಗ ಕುತೂಹಲ ಹುಟ್ಟಿಸುತ್ತದೆ. 'ಬಲ್' ಅಂದರೆ ಹಿರಿದಾದ 'ಸರಿ' ಮಳೆ. 'ಸರಿ' ಅನ್ನುವ ಪದಕ್ಕಿರುವ ಈ 'ಮಳೆ'ಎಂಬ ಅರ್ಥ ವಸ್ತುವನ್ನು ಹಿಡಿದುಕೊಡುವ ರೀತಿಯಲ್ಲಿ ಹೊಸತನ ವನ್ನುಂಟುಮಾಡುತ್ತದೆ. 'ಸರಿ'ಎಂಬ ಪದಕ್ಕಿರುವ ಜನಪ್ರಿಯ ಅರ್ಥ ಆಗಲಿ 'Correct' ಎಂಬುದು

ಈ ಶೋಣಿತ ಮಳೆ ಆಗುತ್ತಿರುವುದು ಸರಿ ಎಂದು ಕವಿ ಬಡವರ ಪರವಹಿಸಿರುವುದು ಕಂಡು ಬರುತ್ತದೆ. 'ಮುಂಗಾರ್ಗಾಲದ ಬಲ್ಸರಿ'ಯ ಮುಂದಿನ ಭಾಗ 'ಅಲ್ಲಿಯ ಕುಲ್ಲುಗಳುರುಳುರುಳ್ವಂತೆ' ಉರುಳುತ್ತಿರುವ ನರ ರುಂಡಗಳ ನರ ಮುಂಡಗಳ ಸಾಂಧ್ರತೆಯನ್ನು 'ಆಲಿಯ ಕಲ್ಲುಗಳು' ಅಭಿವ್ಯಕ್ತಿಸುತ್ತವೆ. ಮುಂಗಾರು ಮಳೆಯಲ್ಲಿರುವ ರಭಸ, ಗುಡುಗು, ಆರ್ಭಟ ಎದೆ ನಡುಗಿಸುವಂಥದು. ಬಡವರ ಕ್ರೋಧಾಗ್ನಿಯಿಂದುಂಟಾದ ಪರಿಸ್ಥಿತಿಯನ್ನು ಮುಂಗಾರಿಗೆ ಹೋಲಿಸಿರುವುದರಲ್ಲಿ ಅರ್ಥವಿದೆ. ಮುಂಗಾರು ಮಳೆ ಹಳೆಯ ಕೊಳೆಯನ್ನೆಲ್ಲ ಕೊಚ್ಚಿ ಹಾಕಿ, ಹೊಸ ಬದಕು ಮೂಡಲು ಪ್ರಕೃತಿಯನ್ನು ಶುದ್ಧಗೊಳಿಸುತ್ತದೆ. ಇಲ್ಲಿ ಬಡವರ ಕ್ರೋಧ ಸಮಾಜವನ್ನು ಕಿತ್ತು ತಿನ್ನುವ ಶ್ರೀಮಂತಶಾಹಿಯನ್ನು ಕೊಚ್ಚಿ ಹಾಕಿ, ಮಾನವ ಲೋಕದಲ್ಲಿ ಹೊಸಜೀವನ-ಸಮಾನತೆಯ, ಮಾನವೀಯತೆಯ ಜೀವನ-ಪ್ರಾರಂಭವಾಗಲು ಅನುವು ಮಾಡಿ ಕೊಡುತ್ತಿದೆ ಎಂದು ಮೇಲಿನ ಹೋಲಿಕೆಯಿಂದ ಕವಿ ಹೇಳಲು ಸಾಧ್ಯವಾಗಿದೆ.

ಕೆಳವರ್ಗದವರನ್ನು ತಿರಸ್ಕರಿಸುವುದರಿಂದ ಆಗುವ ಪರಿಣಾಮನ್ನು ಇಲ್ಲಿ ಕಾಣಬಹುದು. ಕವಿ ಅದನ್ನು ಓದುಗನ ಮುಂದೆ ಬಿಚ್ಚಿ ತೋರಿಸುತ್ತಾರೆ. 'ಸುಂದರಿಯರ ತಲೆಮುಂಡೆಗಳು, ಶ್ರೀಮಂತರ ನೆಣಮಂಡೆಗಳಲ್ಲಿ'ಎಂಬ ಅಭಿವ್ಯಕ್ತಿಯ್ಲಿರುವ ನೆಣ ಎಂಬ ಪದ, ಶ್ರೀಮಂತರು ಬಡವರನ್ನು ತಿಂದು ಕೊಬ್ಬಿರುವ ರೀತಿಯನ್ನು ಹೇಳುತ್ತದೆ. 'ನೆಣ' ಪದಕ್ಕೆ 'ಸೊಕ್ಕು' ಎಂಬ ಸಮೀಪ ಅರ್ಥವೊಂದಿದೆ. 'ಕೊಬ್ಬು' ಮತ್ತು 'ಸೊಕ್ಕು' ಪದಗಳು ಪರಿಸ್ಥಿತಿಗೆ ಕುರುಡಾಗಿರುವ ಶ್ರೀಮಂತಿಕೆ ಯನ್ನು ಧ್ವನಿಸುತ್ತವೆ. ಬಡವನ ಕ್ರೋಧಾಗ್ನಿಗೆ ಸಿಕ್ಕಿದ ಶ್ರೀಮಂತರ 'ನೆಣದುಂಡೆಗಳು' ಧುಡುಂ ಧುಡುಂ ಧುಡುಮ್ಮನೆ ಬಿದ್ದು 'ಸದ್ದು' ಮಾಡುತ್ತಿವೆ ಎಂದು ಕವಿ ಹೇಳುತ್ತಾರೆ. ಇಲ್ಲಯ 'ಧುಡುಂ' ಎಂಬ ಅನುಕರಣ ಶಬ್ದ ಮತ್ತೆ ಎರಡು ಭಾರಿ ಪುನರಾವರ್ತನೆಗೊಂಡಿರುವುದರಿಂದ, 'ನೆಣದುಂಡೆ'ಗಳು ಬೀಳುತ್ತಿರುವ ದೃಶ್ಯವನ್ನು ಶ್ರಾವಕಗೊಳಿಸುತ್ತದೆ. ಈ ಹಂತದಲ್ಲಿ ಕವನ ಹೃದಯಕ್ಕೆ ಹೇಗೋ ಹಾಗೆ ಕಿವಿಗೂ ತಟ್ಟುತ್ತದೆ.

ಈ ರಕ್ತದ ಪ್ರವಾಹದಲ್ಲಿ ಪಾಪ ಪುಣ್ಯದ ಪ್ರಶ್ನೆ ಎಂಬುದಿಲ್ಲ. ಆಗುತ್ತಿರುವ ಯಜ್ಞದಲ್ಲಿ ಎಲ್ಲರೂ ಪಾಲುಗೊಳ್ಳಲೇಬೇಕು. ಆದ್ದರಿಂದ 'ಪಾಪದ ದೇಹ' 'ಪುಣ್ಯದ ದೇಹ' ಮತ್ತು ಗುಡಿಗೋಪುರ, 'ಧರ್ಮದ ದೇಹ' ಎಲ್ಲವೂ 'ತೇಲಿ ತೇಲಿ, ತೇಲಿ ತೇಲಿ, 'ಕಸಕಡ್ಡಿಯ' ರೀತಿ ನುಗ್ಗತ್ತಿರುವಂತೆ ಕವಿಗೆ ಕಾಣುತ್ತದೆ. ಇಲ್ಲಿನ 'ತೇಲಿ' 'ಪದದ ದೀರ್ಘತೆ ವಸ್ತುವನ್ನು ಚಿತ್ರಗೊಳಿ ಸುತ್ತದೆ. 'ಕಸಕಡ್ಡಿ' ಎಂಬ ಪದ ಹಿಂದಿನ ಶ್ರೀಮಂತರ ನೆಣ ದುಂಡೆಗಳನ್ನು ನೆನಪಿಗೆ ತಂದು, ಶ್ರೀಮಂತರ ಸ್ಥಾನವನ್ನು ಸೂಚಿಸುತ್ತದೆ. 'ಕಸಕಡ್ಡಿ'ಗೆ ಹೋಲಿಸಿರುವುದರಿಂದ, ಕವಿಯ ದೃಷ್ಟಿಯಲ್ಲಿ ಶ್ರೀಮಂತರ ಬಗೆಗಿರುವ ಅಸಹ್ಯವನ್ನು ಗಮನಿಸಬಹುದು.

ಇಂಥ ರುದ್ರ ಭೀಕರ ದೃಶ್ಯದಲ್ಲಿ ಓದುಗನು ಸ್ತಂಭೀಭೂತನಾಗಿರುವಾಗ, ಕವಿ ಕಲ್ಕಿಯ ಪಾತ್ರವನ್ನು ತರುತ್ತಾರೆ.

---

5 ಪಾಂಚಜನ್ಯ ಕವನದ 'ರಕ್ತಧುನಿ' ಕವನವನ್ನು ಈ ಸಂದರ್ಭದಲ್ಲಿ ಹೋಲಿಸಿ ನೋಡಬಹುದು.

ಯಾರವನಲ್ಲಿ? ದೂರದಲಿ,
ಧಾವಿಸಿ ಬರುವನು ಕ್ರೌರ್ಯದಲಿ!
ಅಸ್ಥಿಪಂಜರದಶ್ವವನೇರಿ,
ಬೆಳ್ಳಗೆ ಚಿಲಿಯುವ ದಾಡೆಯ ತೋರಿ,
ಅಸ್ಥಿಪಂಜರದಾಳವನು!
ಪ್ರೇತಸ್ವರೂಪಿ ಅದಾರವನು?

ಬಲಗಡೆ ಕೈಯಲಿ ಮಿಂಚಿನ ಕತ್ತಿ?
ಎಡಗಡೆ ಕೈಯಲಿ ಸಿಡಿಲಿನ ಬುತ್ತಿ?
ಎಲುಬಿನ ಕುದುರೆ! ಎಲುಬಿನ ಆಳು
ಇವನೆಯ ಕಲ್ಕಿ ಬಡವರ ಬಾಳು?
ಮೂರ್ತಿವೆತ್ತಿಹ ಬಡವರ ಗೋಳು!

'ಯಾರವನಲ್ಲಿ?' ಎಂಬಲ್ಲಿನ ಪ್ರಶ್ನೆ ಕುತೂಹಲ ಮಾಡಿಸುತ್ತದೆ. ಕವನದಲ್ಲಿ ಈ ಹಿಂದೆ 'ಬಡವನೆಕಲಿಯುಗದಂತ್ಯದ ಕಲ್ಕಿ' ಎಂದು ಕವಿ ಆಶಯ ವ್ಯಕ್ತಪಡಿಸುತ್ತಾರೆ. ಇದು ಇಲ್ಲಿ ಸಾಧ್ಯವಾಗುತ್ತದೆ. 'ಯಾರವನಲ್ಲಿ'? ಎಂಬಲ್ಲಿರುವ ಪ್ರಶ್ನೆಯ ಜೊತೆಬೆರೆತುಕೊಂಡಿರುವ ಬೆರಗು, ವಿಸ್ಮಯ, ಹೆದರಿಕೆಯ ಭಾವಗಳು ಮುಂದೆ ಕಾಣಿಸಿಕೊಳ್ಳಲಿರುವ ಕಲ್ಕಿಯ, ಚಿತ್ರವನ್ನು ಊಹಿಸುವಂತೆ ಮಾಡುತ್ತವೆ. ಆತ ಮೆಲ್ಲಗೆ ಬರುತ್ತಿಲ್ಲ. 'ಧಾವಿಸಿ' ಬರುತ್ತಿದ್ದಾನೆ. 'ಕ್ರೌರ್ಯ'ದಿಂದ ಕೂಡಿದ್ದಾನೆ. ಇಂಥ ವ್ಯಕ್ತಿಯ ಚಿತ್ರವನ್ನು ಕವಿ ಮುಂದೆ ತುಂಬಾ ಧ್ವನಿಪೂರ್ಣವಾಗಿ ಕೆತ್ತುತ್ತಾರೆ:ಆತ 'ಅಸ್ಥಿಪಂಜರದಶ್ವವನೇರಿ'ದ್ದ ಎಂಬಲ್ಲಿನ 'ಕುದುರೆ' ಕ್ರೋಧಕ್ಕೆ ಸಂಕೇತವಾಗುತ್ತದೆ. ಅದು ಎಂಥ ಕುದುರೆ?' ಅಸ್ಥಿಪಂಜರದಶ್ವ'? ಈ ಮಾತು ಬಡವನನ್ನುನೆನಪಿಗೆ ತರುತ್ತದೆ. ಆ ಅಸ್ಥಿಪಂಜರ'ಬೆಳ್ಳಗೆ ಚಿಲಿ ಯುವ ದಾಡೆ'ಯನ್ನು ತೋರಿಸುತ್ತಿತ್ತು. 'ದಾಡೆ' ಹಸಿವಿನ ಸಂಕೇತ. ತನ್ನ ಹಸಿವಿನ 'ಚಿಲಿಯುವಿಕೆ' ಯಿಂದ ತಪ್ತನಾಗಿದ್ದಾನೆ ಬಡವ. ಮುಂದಿನ 'ಅಸ್ಥಿಪಂಜರದಾಳು'ಮತ್ತು 'ಪ್ರೇತ ಸ್ವರೂಪಿ'- ನೋಡುವವರ ಎದೆಗೆ ಭಯವನ್ನುಂಟುಮಾಡುವ ವ್ಯಕ್ತಿ. 'ಅಸ್ಥಿಪಂಜರದಾಳು'-ಬಡವನೇ ಆಗಿರುತ್ತಾನೆ. ಆತ ಹಸಿನಿನಿಂದ ಇಂದು ಶ್ರೀಮಂತರನ್ನು ಕಾಡಲು ಬರುತ್ತಿರುವ 'ಪ್ರೇತ ಸ್ವರೂಪಿ'ಯಾಗಿದ್ದಾನೆ. ಆತನ ಒಂದು ಕೈಯಲ್ಲಿ 'ಮಿಂಚಿನ ಕತ್ತಿ, ಮತ್ತೊಂದು ಕೈಯಲ್ಲಿ 'ಸಿಡಿಲಿನ ಬುತ್ತಿ' ಇವೆ. 'ಮಿಂಚು ಮತ್ತು ಸಿಡಿಲು'ಗಳು ರೋಷಕ್ಕೆ ಸಂಕೇತವಾಗುತ್ತವೆ. 'ಬುತ್ತಿ'ಎಂಬುದು ಮುಗಿಯದ್ದಕ್ಕೆ ಸಂಕೇತವಾಗುತ್ತದೆ. ಈ ಬಡವರ ರೋಷ ಇಲ್ಲಿಗೆ ಮುಗಿಯುವುದಿಲ್ಲ. ಇನ್ನೂ ಮುಂದುವರಿಯುತ್ತದೆ. 'ಎಲುಬು' ಇಲ್ಲಿ ನಮ್ಮ ಸಾಮಾಜಿಕ ಸ್ಥಿತಿಯ ಚಿತ್ರ ಕೊಡುತ್ತದೆ. ನಮ್ಮ ಸಾಮಾಜಿಕ ಅಸಮಾನತೆಯಿಂದುಂಟಾದ ನೋವಿನ ಅನಿವಾರ್ಯ ಜನನವೆ 'ಕಲ್ಕಿ'ಯಾಗಿ ಕವಿಗೆ

ಕಂಡಿದೆ. ಆಗ ಕವಿ 'ಇವನೆಯೆ ಕಲ್ಕಿ?'ಎಂದು ಸಂದೇಹ ವ್ಯಕ್ತಪಡಿಸುತ್ತಾರೆ. ಇದಕ್ಕೆ ಕಾರಣವಿದೆ. ಕವಿ 'ಕಲ್ಕಿ'ಯನ್ನು ಇಲ್ಲಿಯವರೆಗೆ ಗುರುತಿಸಿರಲಲ್ಲ. ಇಲ್ಲಿಯೇ ಇದ್ದ 'ಬಡವರ ಬಾಳು' 'ಕಲ್ಕಿ'ಯ ಮೂರ್ತಿವೆತ್ತಿದೆ'.ಕವಿ ಅದನ್ನು ಗುರುತಿಸಿಕೊಂಡಾಗ ಅನ್ನಿಸುತ್ತದೆ: 'ಬಡವರ ಗೋಳು' ಸಾಮಾನ್ಯವಾದುದಲ್ಲ. ಅದರ ತೀಕ್ಷ್ಣತೆ ಅಪಾರ. ಅದು ತೆಳೆಯಬಹುದಾದ ರೂಪು ಸಾಮಾನ್ಯ ವಾದುದಾಗಿರದೆ, ವಿಲಕ್ಷಣವಾಗಿದೆ. ಈ ವಿಲಕ್ಷಣತೆಯೆಂಬುದು ನಮ್ಮ ಬದುಕಿನಿಂದಲೇ ಮೂಡಿದ ಸತ್ಯವಾಗದೆ.

ಕುವೆಂಪು ಅವರ 'ಕಲ್ಕಿ'ಯ ಅವತಾರ ಕಲ್ಪನೆ ವೈಚಾರಿಕವಾದುದು. ಪ್ರತಿಮಾ ವಿಧಾನದಿಂದ ಬಡವ ನಿರ್ಲಕ್ಷ್ಯತನದಿಂದುಂಟಾಗಬಹುದಾದ ಕ್ರಾಂತಿಯ ಸ್ವರೂಪ ಮತ್ತು ಸಾಧ್ಯತೆಗಳನ್ನು ತಿಳಿಸುತ್ತಾರೆ.

'ಕಲ್ಕಿ'ಯ ಜನನಕ್ಕೆ ಮೂಲ ಕಾರಣ 'ಹಸಿವು'. ಆ ಹಸಿವನ್ನುಹಿಂಗಿಸಿಕೊಳ್ಳಲು ಆತ ಈ ರೂಪ ತಾಳಿದ್ದಾನೆ. "ಹಸಿವೇ! ದಾಹಾ" ಎಂಬ ಮಾತುಗಳಾಗಲೀ, "ರಕ್ತಾ! ರಕ್ತಾ!"ಎಂಬ ಮಾತುಗಳಾಲೀ ಬಡವನ ಅದಮ್ಯ ಆಸೆಯನ್ನು, ಆಸೆಯ ಭಯಂಕರತೆಯನ್ನು ತಿಳಿಸುತ್ತವೆ, ಈ "ಹಸಿವು" ಈಗ ಅನ್ನವನ್ನು ಬಯಸುತ್ತಿಲ್ಲ; "ರಕ್ತ"ವನ್ನು ಬಯಸುತ್ತಿದೆ. ರಕ್ತತೃಷೆಯಿಂದ ಕೆರಳುವ ಕಲ್ಕಿಯ ಮುಂದಿನ ಕ್ರಿಯೆಗಳು ಭಯಾನಕವಾಗಿದೆ.

ನೆತ್ತರು ಹೊಳೆಯಲಿ ಧುಮುಕಿದನು,
ಕುದುರೆಯೊಡನೆ ಧುಮ್ಮಿಕ್ಕಿದನು!
ಕುಡಿದನು ರಕ್ತದ ಮೊಗೆ ಮೊಗೆದು,
ತಿಂದನು ತಲೆಗಳ ತೆಗೆ ತೆಗೆದು!

ಬಡವರ ಕ್ರೋಧವೇ ಕ್ರಿಯಾರೂಪ ತಾಳಿದೆ;ಅಮಾನುಷ ಕ್ರಿಯೆ ಯಲ್ಲಿ ತೊಡಗಿದೆ. 'ಮೊಗ ಮೊಗೆದು'ರಕ್ತವನ್ನು ಕುಡಿಯುವ ಕ್ರಿಯೆ, 'ತೆಗೆ ತೆಗೆದು'ತಲೆಗಳ ತಿನ್ನುವ ಕ್ರಿಯೆ ಬಡವರ ಕ್ರೋಧದ ತೀವ್ರತೆಯನ್ನು ಹೇಳುತ್ತದೆ. ಇಲ್ಲಿ ಮನುಷ್ಯ ದೈತ್ಯನಾಗಿದ್ದಾನೆ, ಮನುಷ್ಯತ್ವ ದೈತ್ಯತ್ವಕ್ಕೇರಿರುವ ಈ ಕ್ರಿಯೆಗೆ ಮೂಲ ಕಾರಣವನ್ನುಬುಡ ಸಮೇತವಾಗಿ ತಿನ್ನುವಂಥ ದಾಹ ಇಲ್ಲಿವ್ಯಕ್ತವಾಗಿದೆ.

ಸರ್ವಜೀವದ ಮೇಲೆ ತನ್ನ ರುದ್ರಾನಾಟ್ಯವನ್ನಾಡಿದ 'ಎಲುಬಿನ ಮೂರ್ತಿ ಗಹ ಗಹಿಸುತ್ತಿತ್ತು'ಎಂಬ ಮಾತಿನಲ್ಲಿ ಬಡವನ ವಿಕಟಾವಸ್ಥೆ ವ್ಯಕ್ತವಾಗುತ್ತದೆ. ಆ 'ಗಹಗಹ'ಹಾಸದಲ್ಲಿ ಗುಡುಗಿನ ಮಾಲೆ'ಹೊರ ಹೊಮ್ಮುತ್ತಿತಂತೆ. ಅವನ ಕುದುರೆಯ ಕೆನೆತದ ಸದ್ದು 'ಬೊಮ್ಮನ' ಬಿರಿವಂತಿತ್ತಂತೆ. 'ಬೊಮ್ಮ' ಬ್ರಹ್ಮ ಸೃಷ್ಟಿಕರ್ತನೇ ಬಿರಿಯುವಂತೆ, ಹೆದರುವಂತೆ ಅಸ್ಥಿಪಂಜರದಶ್ವದ ಕೆನೆತ ಇತ್ತು ಎಂಬಲ್ಲಿ ವ್ಯಕ್ತವಾಗುವ ಬಡವರ ಸಿಡಿತ ಗಮನಾರ್ಹವಾದುದು. ಬೊಮ್ಮ ಎಂಬ ಪದಕ್ಕೆ ವಿಧಿ ಎಂಬ ಅರ್ಥವೂ ಉಂಟು. ವಿಧಿ ಕಲ್ಪನೆ ಕುವೆಂಪು ಅವರಿಗುಂಟು. 'ವಿಧಿ'ಲಿಖಿತವೇ

ಹೆದರಿ ತನ್ನ ಬರಹವನ್ನು ಬದಲಿಸಿಕೊಳ್ಳುವಂತೆ ಬಡವರ ಕ್ರೋಧ ಇತಿಹಾಸವನ್ನು ಸೃಷ್ಟಿಸ ಬಲ್ಲದು ಎಂಬ ಸತ್ಯ ಇದರಿಂದ ವ್ಯಕ್ತವಾಗುತ್ತದೆ. ಗುಡಿಗಿನ ಮಾಲೆ ಬಡವರ ಕ್ರೋಧವನ್ನು ಪ್ರತಿಧ್ವನಿಸುತ್ತದೆ.

ಮುಂದಿನ ಸಾಲುಗಳಲ್ಲಿ ಕುಡಿದು ತಿನ್ನುವ ಕ್ರಿಯೆ ಪುನರಭಿನಯಗೊಳ್ಳುತ್ತದೆ. ರಕ್ತ ಮತ್ತು ಹೆಣಗಳು ಮುಗಿಯುತ್ತವೆ. ಕಲ್ಕಿಗೆ'ಇನ್ನೂ ಹಸಿವು'ಇನ್ನೂದಾಹ'. ಬಡವರ ದಾಹದ ನಿರಂತರೆಯನ್ನು ತೋರಿ, ವಸ್ತುವನ್ನು ಆಳವಾಗಿಸಿದೆ, ಇಲ್ಲಿಯ ರಚನೆ. ಒಂದು ಸಮಸ್ಯೆ ಕೇವಲ ಕ್ರಾಂತಿಯಲ್ಲಿಗೇ ಮುಗಿಯುವುದಿಲ್ಲ. ಅದು ಮುಂದುವರಿದು ಒಂದು ಸ್ಪಷ್ಟ ರೂಪ ಧರಿಸಬೇಕಾಗುತ್ತದೆ. ಕಲ್ಕಿಯ ಮುಗಿಯದ ಹಸಿವು ದಾಹಗಳು ನಮ್ಮ ಸಮಾಜದ ಹಸಿವಿನ ತೀವ್ರತೆ ಮತ್ತು ಅವಶ್ಯಕತೆಯನ್ನು ತೋರಿಸಿಕೊಡುತ್ತವೆ. ಶತ ಶತಮಾನಗಳಿಂದ ತಡೆದುಕೊಂಡು ಬಂದ ಮೌಢ್ಯದ ಹಸಿವು ಜ್ಞಾನದ ದಾಹ ದುಡಿಯುವ ವರ್ಗವನ್ನು ಹುಚ್ಚೆಬ್ಬಿಸಿದೆ. ಅದಕ್ಕೆ ಎಷ್ಟು ತಿಂದರೂ ಸಾಲುವುದಿಲ್ಲ ಬಡವರ ಗಂಟಲು 'ಬೇಗೆ'ಯ ದಾಹದಿಂದ ಕೂಡಿದೆ ಎಂಬಲ್ಲಿರುವ ತಾಪದ ಅರಿವು ಮುಂದೆ "ಬೆಂಕಿ" ಎಂಬ ಮಾತಿನೊಂದಿಗೆ ಹೊಂದಿಕೊಂಡು ಬಡವರ ಹಸಿವಿನ ತೀವ್ರತೆಯನ್ನು ಹೇಳಲು ಸಮರ್ಥವಾಗಿದೆ. ಕಲ್ಕಿಯ ಹೊಟ್ಟೆ ಶ್ರೀಮಂತರ ಅಹುತಿಯಿಂದ ತುಂಬದು. ಆದು ಮತ್ತೂ ಬಯಸಿದೆ. "ತುಂಬದೊ ಹೊಟ್ಟೆ" ಎಂಬಲ್ಲಿರುವ ಮುಂದುವರಿಕೆ ಚಿಹ್ನೆಗಳು ಸಮಸ್ಯೆಯನ್ನು ವ್ಯಾಪ್ತಿಗೊಳಿಸುತ್ತವೆ.

ಕವನದಲ್ಲಿ ಕವಿಯ ನಿರೂಪಣೆ ಮತ್ತೆ ಇಲ್ಲಿಗೆ ಮುಗಿದು, ಮುಂದೆ ಕವಿ ಸ್ವತಃ ವಸ್ತುವಿನ ಒಂದು ಪಾತ್ರವಾಗಿರುತ್ತಾನೆ. 'ಕಲ್ಕಿ' ಮತ್ತು 'ಕವಿ' ಪರಸ್ಪರ ಒಬ್ಬರನ್ನೊಬ್ಬರು ಇಲ್ಲಿ ದೃಷ್ಟಿಯಲ್ಲಿ ಸಂಧಿಸುತ್ತಾರೆ 'ಕಲ್ಕಿ'ಯ ಹಿಂಗದ ಹಸಿವು ದಾಹಗಳನ್ನು ಸ್ವತಃ ಕಣ್ಣಿಂದ ನೋಡಿದ ಕವಿಗೆ 'ಕಲ್ಕಿ'ಯ ಬಗ್ಗೆ ಹೆದರಿಕೆ ಪ್ರಾರಂಭವಾಗುತ್ತದೆ. ಶ್ರೀಮಂತರನ್ನು ತಿಂದು ನೊಣೆದಂತೆ ನನ್ನನ್ನೂ ತಿಂದು ತೇಗೇ ತೇಗುತ್ತಾನೆಂಬ ನಂಬಿಕೆ ಕವಿಗೆ ಬರುತ್ತದೆ.

ನೋಡಿದನೆನ್ನಂ ಬೆಟ್ಟದ ಮೇಲೆ !
ಬರುತಿಹನಯ್ಯೋ !ಒಲ್ಲೇ! ಒಲ್ಲೇ!
ನೋಡುತಲಿದ್ದೆ
ಕಂಪಿಸಿ ಬಿದ್ದೆ

'ಬೆಟ್ಟದ ಮೇಲೆ' ಎಂಬ ಪದ ಪರಿಸ್ಥಿತಿಯಿಂದ ಪಲಾಯನ ಮಾಡಿ ದೂರ ನಿಂತಿದ್ದ ಕವಿಯನ್ನು ಸಂಕೇತಿಸುತ್ತದೆ. ಇಲ್ಲಿ ಪಲಾಯನಕ್ಕೆ ಅಸ್ಪದವಿಲ್ಲವೆಂದು ಈ ಮೊದಲೇ ನೋಡಿದ್ದೇವೆ. ಇಂಥ ಪಲಾಯನವಾದಿಯನ್ನು 'ಕಲ್ಕಿ' ನೋಡುತ್ತಾನೆ. ಕವಿಯ ಕಡೆ ಬರತೊಡಗುತ್ತಾನೆ. ಆಗ 'ಒಲ್ಲೇ ಒಲ್ಲೇ' ಎಂದು ಕವಿ ಉದ್ಗಾರ ತೆಗೆಯುತ್ತಾನೆ, 'ಅಯ್ಯೋ ಕೆಟ್ಟೆ'ಎಂದು ಚೀರುತ್ತಾನೆ 'ಕಲ್ಕಿ'ಯ ರೌದ್ರ ಹಸಿವನ್ನೂ ತನ್ನ ಮುಂದಿನ ಗತಿಯನ್ನೂ ನೆನೆದು 'ಕಂಪಿಸಿ' ಬೀಳುತ್ತಾನೆ.

"ಕಲ್ಕೀ !ಕಲ್ಕೀ!"ಎನ್ನುತ ಚೀರಿ
ಕನಸೊಡೆದೆದ್ದೆ!
ಇನ್ನೆಲ್ಲಿಯ ನಿದ್ದೆ?

ಕವನದ ಕೊನೆಯ ಸಾಲುಗಳಿವು. ತನ್ನತ್ತ ನುಗ್ಗಿದ 'ಕಲ್ಕಿ'ಯನ್ನು ನೋಡಿ, 'ಕವಿ ಚಿಟ್ಟನೆ ಚೀರಿ ನಿದ್ದೆಯಿಂದ ಏಳುವನು, ಕನಸು ಒಡೆಯುವುದು......... ಈಗ ಕೊನೆಯ ಚರಣವನ್ನು ಪರಿಶೀಲಿಸಿ "ಇನ್ನೆಲ್ಲಿಯ ನಿದ್ದೆ"ಇಷ್ಟು ಭಯಂಕರವಾದ ಕನಸನ್ನು ಕಂಡು ಎಚ್ಚರಗೊಂಡ ಬಳಿಕ ನನಗೆ ನಿದ್ದೆ ಬರುವುದುಂಟೆ? ಎಂಬುದೇ ಇಲ್ಲಿಯ ವಾಚ್ಯಾರ್ಥ. ಇದು ಸಂದರ್ಭಕ್ಕೆ ಹೊಂದಿದರೂ, ಇಷ್ಟಕ್ಕೆ ವಾಕ್ಯದ ಅರ್ಥವೆಲ್ಲ ಮುಗಿದಿದ್ದರೆ ಈ ಉಜ್ವಲ ವಾದ ಕವನಕ್ಕೆ ಸಪ್ಪೆಯಾದ ಮುಕ್ತಾಯವಾಗುತ್ತಿತ್ತು. ಕನಸಿನ ವೃತ್ತಾಂತವನ್ನೆಲ್ಲಾ ಅನುಶೀಲನ ಮಾಡಿಕೊಂಡು ಬಂದವರಿಗೆ ಇಲ್ಲಿ ಉದಾತ್ತಾವಾದ ಬೇರೊಂದು ಅರ್ಥ ನಿಸ್ಸಂದೇಹವಾಗಿ ಧ್ವನಿತವಾಗುತ್ತದೆ. ಇಲ್ಲಿ "ನಿದ್ದೆ"ಎಂದರೆ ನಿಜವಾಗಿ "ಮನಸ್ಸಿನ ನೆಮ್ಮದಿ". ಜಗತ್ತಿನ ವಿಷಮ ಸ್ಥಿತಿಯನ್ನು ಕಲ್ಕಿಯ ರೂಪದಲ್ಲಿ ಹೊಸದಾಗಿ ದರ್ಶನ ಪಡೆದ ಕವಿಗೆ ಇನ್ನು ಮನಸ್ಸು ನೆಮ್ಮದಿಯಾಗಿ ನಿಶ್ಚಿಂತೆಯಾಗಿ ಉಳಿಯುವುದೆಲ್ಲಿ ಬಂತು! ಇದುವರೆಗೆ ಕನಸಿನ ನಾಡಿನಲ್ಲಿ ವಿಹರಿಸುತ್ತಿದ್ದವನ ಕಣ್ಣಿಗೆ ಲೋಕದ ದುಃಖ ದುರಿತಗಳ ಸ್ವರೂಪ ಚೆನ್ನಾಗಿ ಕಟ್ಟಿತು. ಸ್ವಚ್ಛಂದವಾಗಿದ್ದ ಮನಸ್ಸು ಕದಡಿ ಹೋಯಿತು?[6]

ಮೇಲಿನ ಮಾತುಗಳಿಂದ ಕವಿಗಾದ ಮಾನಸಿಕ ಎಚ್ಚರವನ್ನು ಗಮನಿಸ ಬಹುದು. ಆದರಿದು ಓದುಗರ ಮಾನಸಿಕ ಎಚ್ಚರವೂ ಹೌದು. ಕವಿ ಸಮಾಜ ಜೀವಿಯೂ ಆಗಿ, ಓದುಗರನ್ನು ಪ್ರತಿನಿಧಿಸುತ್ತಾನೆ. ಕವಿಯ ಜೊತೆಯಲ್ಲಿ ಓದುಗರೂ ಕೂಡ ಲೋಕದ ದುಃಖದುರಿತಗಳ ಸ್ವರೂಪವನ್ನು ಅರಿತುಕೊಳ್ಳುವಂತಾಗುತ್ತದೆ. ಕವನದ ಈ ಮುಕ್ತಾಯವೇ ಹೊಸತನದಿಂದ ಕೂಡಿದ್ದು, ಕವನದುದ್ದಕ್ಕೂ ವಸ್ತುವಿನ ಭಯಂಕರ ಭರಾಟೆಯಲ್ಲಿ ಅದ್ದಿ ಹೋಗಿದ್ದ ಓದುಗ ಕೊನೆಯಲ್ಲಿ ಸರಾಗವಾದ ಉಸಿರು ಬಿಡಲು ಸಾಧ್ಯವಾಗುವುದಿಲ್ಲ. ವಸ್ತುವಿನ ಸಂಕೀರ್ಣತೆಯಲ್ಲಿ, ಸಮಸ್ಯೆಯಲ್ಲಿ ತಾನೂ ಐಕ್ಯವಾಗುತ್ತಾನೆ. ಕವನ ಓದುಗನ ಮೇಲೆ ಈ ತರದ ದಟ್ಟವಾದ ಪರಿಣಾಮ ಬೀರಿ ಮುಕ್ತಾಯಗೊಳ್ಳುವುದರಿಂದ ಸಮಸ್ಯೆಯಲ್ಲಿ ತನ್ನ ಪಾಲನ್ನು ಹುಡುಕಿಕೊಂಡು ಆತ್ಮ ಶೋಧನೆಗೆ ತೊಡಗುವಂತೆ ಓದುಗನನ್ನು ಉದ್ದೀಪಿಸುತ್ತದೆ. ಇದರಿಂದಾಗಿ ಕವನದ ಉದ್ದೇಶ ಸಾರ್ಥಕವಾಗುತ್ತದೆ.

ಕಲ್ಕಿ ಮುಖ್ಯವಾಗಿ ಸಾಮಾಜಿಕ ಕವನ. ಕವನದಲ್ಲಿ ಎಲ್ಲಿಯೂ ಸಾಹಿತ್ತಿಕ ಕಸರತ್ತನ್ನು ನಡೆಸಿರುವುದು ಕಂಡು ಬರುವುದಿಲ್ಲ. ಸರಳವಾದ ಬರವಣಿಗೆ ಕವನದ ವಸ್ತುವನ್ನು ಎಲ್ಲಿಯೂ

---

6. ತೀನಂಶ್ರೀ ಭಾರತೀಯ ಕಾವ್ಯ ಮಿಮಾಂಸೆ ಪುಟ ೨೭೪ (ಮಾರನೆಯ ಮುದ್ರಣ ೧೯೬೮)
ಸುಮಾರು ಮೂವತ್ತು ವರ್ಷಗಳ ಹಿಂದೆಯೇ 'ಕಲ್ಕೀ'ಕವನದ ಕೊನೆಯ ಸಾಲುಗಳ ಬಗ್ಗೆ ತೀನಂಶ್ರೀ ಬರೆದ ವಿಶ್ಲೇಷಣೆ ಅತ್ಯುತ್ತಮವಾಗಿದೆ, ಸಮಂಜಕವಾಗಿದೆ ಎನ್ನಿಸಿದ್ದರಿಂದ ಇಲ್ಲಿ ಕೊಟ್ಟದ್ದೇನೆ.

ತೆಳ್ಳಗೆ ಮಾಡುವುದಿಲ್ಲ. ಕವನದಲ್ಲಿ ಮುಖ್ಯವಾಗಿ ಆರು ಹಂತಗಳನ್ನು ಗುರುತಿಸಬಹುದು ೧. ಕವಿಕನಸಿನ ಬೀದಿಯಲ್ಲಿ ಹೊರಟು ಬೆಟ್ಟವನ್ನು ಹತ್ತುವಿಕೆ. ೨. ಬೆಟ್ಟದ ಮೇಲೆ ನಿಂತು ಊರಿನ ಮೂಲಕ ನಮ್ಮ ಸಾಮಾಜಿಕ ಅಸಮಾನತೆಯನ್ನು ಗುರುತಿಸಿಕೊಳ್ಳುವಿಕೆ ೩. ಬಡವರ ಜಠಾಗ್ನಿಯು ಸಿಡಿದೆದ್ದು ಶ್ರೀಮಂತರೇ ಮೊದಲಾದ ಶೋಷಕರನ್ನು ಸೀಯುವಿಕೆ. ೪. ರಕ್ತದಝುರಿಯಲ್ಲಿ ನರ ಮುಂಡ ರುಂಡಗಳು ಕಸ ಕಡ್ಡಿ ರೀತಿ ತೇಲುವಿಕೆ ೫. 'ಕಲ್ಕಿ'ಯ ಅವತಾರ ಮತ್ತು ಅವನ ಹಸಿವು ದಾಹ ತಿಂದೂ ಕುಡಿದೂ ಹಿಂಗದಿರುವಿಕೆ ೬. ಕವಿಯು ಕಂಡುಕೊಳ್ಳುವ ದರ್ಶನ ಅರ್ಥಾತ್ ಓದುಗನು ಕಂಡುಕೊಳ್ಳುವ ದರ್ಶನ.

ಈ ಆರು ಹಂತಗಳನ್ನು ಒಳಗೊಂಡಿರುವ ಧೀರ್ಘ ಕವನದಲ್ಲಿ ಶಿಲ್ಪ ಎಲ್ಲೂ ಕಲ್ಲಿಸಿಕೊಳ್ಳುವುದಿಲ್ಲ ಕೆಲವೆಡೆ ಕೆಲವು ಭಾವಗಳು ಪುನರಾವರ್ತನೆಗೊಳ್ಳುತ್ತವೆಯಾದರೂ, ಅವು ಕವನದ ರಚನೆಯ ಹೊರಗುಳಿಯಾದೆ ಹಂತದಿಂದ ಹಂತಕ್ಕೆ ವಸ್ತುವನ್ನು ಮುಂದುವರಿಸಿಕೊಂಡು ಹೋಗಲು ಸಹಾಯವಾಗುತ್ತವೆ. (ಈ ಕವನದ ವಿಶ್ಲೇಷಣೆಯ ಸಂದರ್ಭದಲ್ಲಿಯೇ ಶಿಲ್ಪದ ಬಗ್ಗೆ ಬರೆದಿದ್ದೇನೆ) ಕವನದ ನೇರ ನಡಿಗೆ ಅನಿವಾರ್ಯವೆನ್ನಿಸುವಷ್ಟರ ಮಟ್ಟಿನ ಸಹಜವಾದ ಸಂಕೇತಗಳು ಕವನವನ್ನು ಗಟ್ಟಿಗೊಳಿಸಿವೆ, ಇಂಥ ಬರವಣಿಗೆಗಳು ಕುವೆಂಪು ಅವರಲ್ಲಿ ಬಹಳ. ಕುವೆಂಪು ಅವರ ಕಾವ್ಯಾಭಿವ್ಯಕ್ತಿಯ ಮೇಲೆ ಇಂಥವು ಬೆಳಕು ಚೆಲ್ಲುತ್ತವೆ.

ಕುವೆಂಪು ಅವರು ಈ ಕವನವನ್ನು ತಮ್ಮ ಅಪೂರ್ವ ರಚನಾಶಕ್ತಿಯಿಂದ ಒಳ್ಳೇ ರೂಪಕ ಕಾವ್ಯನ್ನಾಗಿಸಿದ್ದಾರೆ. ಪ್ರತಿ ಹಂತದಲ್ಲೂ ನಾಟಕೀಯಾಂಶವನ್ನೂ ಗುರುತಿಸಬಹುದು. ವಸ್ತುವೇ ಜೀವಂತವಾದ ಮುಖ್ಯ ಪಾತ್ರ. ಬಡವ ಶ್ರೀಮಂತರ ಮನೆಗಳು, ಬಡವರ ಸಿಟ್ಟೇ ಬೆಂಕಿಯಾಗಿ ಶ್ರೀಮಂತರನ್ನು ದಹಿಸುವ ಚಿತ್ರ, ಆಗ ಜನರ ಹಾಹಾಕಾರ, ಕಲ್ಕಿಯ ಉದಯ, ಅವನ ರುದ್ರ ನಾಟ್ಯ-ಎಲ್ಲವೂ ನಾಟಕೀಯವಾಗಿ, ಕವನದಲ್ಲಿ ಅಭಿನಯಿತವಾಗುತ್ತವೆ. ಕೊನೆಯಲ್ಲಿ ಕವಿಯ ಪಾತ್ರದಲ್ಲಿರುವ ಚುರುಕು, ಹೆದರಿಕೆಗಳು ಭಾವಪೂರಿತವಾಗಿ ಅಭಿವ್ಯಕ್ತಗೊಂಡಿವೆ. ಹೀಗೆ ಇಡೀ ಕವನವೇ ದೃಶ್ಯಕಾವ್ಯವಾಗಿ ಮಾರ್ಪಡುತ್ತದೆ.

ಕವನದಲ್ಲಿ ವಿಶೇಷವಾಗಿ ಗಮನ ಸೆಳೆಯುವ ಮತ್ತೊಂದು ಅಂಶವೆಂದರೆ ಇಲ್ಲಿ ಕ್ರಿಯಾ ಪದಗಳು ನಿರ್ವಹಿಸುವ ಅದ್ಭುತ ಕೆಲಸ. ಒಂದು ಚರಣದಲ್ಲಿ ನಾಲ್ಕಾರು ಕ್ರಿಯಾಪದಗಳು ಬಂದು, ವಸ್ತುವನ್ನು ನಡೆಯಿಸುವ ರೀತಿ ಆಶ್ಚರ್ಯ ಹುಟ್ಟಿಸುತ್ತದೆ. ಉದಾಹಣೆಗೆ ತಿರುಗಿದೆ, ತೊಳಲಿದೆ, ತಪ್ಪಿತು ಹಾದಿ, ಎಂಬ ಸಾಲು ಇಲ್ಲಿ ಕವಿಯು ತಿರುಗುವ ಕ್ರಿಯೆ, ತಿರುಗಾಟದಿಂದ ಉಂಟಾದ 'ತೊಳಲಿಕೆ'ಯ ಕ್ರಿಯೆ, 'ತೊಳಲಿಕೆ'ಯಿಂದ ಉಂಟಾದ ಫಲ, ತಪ್ಪಿತು ಹಾದಿ, ಹೀಗೆ ಒಂದೇ ಸಾಲಿನಲ್ಲಿ ಕ್ರಿಯಾಪದಗಳು ಕ್ರಿಯೆಯನ್ನು ಮುಂದುವರಿಸುವಲ್ಲಿ ಯಶಸ್ವಿಯಾಗುತ್ತವೆ. ಜೊತೆಗೆ ಈ ಕ್ರಿಯಾಪದಗಳು ತಿರುಗುವ, ತೊಳಲುವ ಕವಿಯ ಭಾವವನ್ನು ಅಭಿನಯಿಸಿ ಹೇಳುತ್ತವೆ. 'ನಡದೇ ನಡದೇ ನಡೆದೂ ನಡೆದೆ, ಸಹಾಸ ಬಿಡದೆ, ಎದೆಗೆಡೆದೆ! 'ಹತ್ತೀ ಹತ್ತೀ ಹತ್ತಿ ಕಡೆಯಲ್ಲಿ ಸಿಕ್ಕಿತು ನಡುನೆತ್ತಿ!' 'ನೋಡುತಲಿದ್ದೆ' ನೋಡುತಲಿದ್ದೆ! ಕಣ್ಮರೆಯಾಯಿತು ಆ ದೃಶ್ಯ! 'ಹತ್ತಿ

ಕುದುರೆಯೂ, ಕುಡಿದೂ ಆಳು ಕುಡಿದೂ ತಿಂದರು ಶವಗಳ ಲರಿಲರಿ ಕಡಿದೂ! ಇಂಥ ಕಡೆಯಲ್ಲಿ ಕ್ರಿಯೆ ನಿರ್ವಹಿಸುವ ಪಾತ್ರವನ್ನು ಮರೆಯುವಂತಿಲ್ಲ.

ಕವನದ ಲಯ ತುಂಬಾ ಆಕರ್ಷಕವಾಗಿದೆ. ಕಲ್ಕಿ ಕವನದ ಪ್ರತಿ ಎರಡು ಸಾಲುಗಳು ಒಂದು ಘಟಕವಾಗಿ ನಿಲ್ಲುತ್ತವೆ. ಪ್ರತಿ ಎರಡು ಸಾಲಿನ ಲಯ, ಛಂದ ಒಂದೇ ಆಗಿರುತ್ತದೆ.

ನಿದ್ದೆಯ ಲೋಕದಿ ಕನಸಿನ ಬೀದಿ
ತಿರುಗಿದೆ, ತೊಳಲಿದೆ, ತಪ್ಪಿತು ಹಾದಿ!

ಬತ್ತಿತು ರಣಧುನಿ ಇನ್ನೂ ದಾಹ!
ಮುಗಿದುವು ಹೆಣುಗಳು: ಇನ್ನೂ ಹಸಿವು!

ಹೀಗೆ ಪ್ರತ್ಯೇಕ ಪ್ರತ್ಯೇಕವಾಗಿ ಎರಡರಡು ಸಾಲುಗಳು ನಿಂತು ಹರಿಹರನರಗಳೆಯನ್ನು ನೆನಪಿಗೆ ತರುತ್ತವೆ. ಆದರೆ ಹರಿಹರನಲ್ಲಿ ನಿಯತವಾಗುವ ಆದಿ ಪ್ರಾಸವಿಲ್ಲ. ಇಲ್ಲಿ ಕೇವಲ ಅಂತ್ಯ ಪ್ರಾಸ ನಿಯತವಾಗಿರುತ್ತದೆ. ಮತ್ತೆ ಕೆಲವೆಡೆ ಒಂದೇ ಸಾಲು ಎರಡು ಸಾಲಾಗಿ ಒಡೆದಿರುವುದನ್ನು ಗಮನಿಸಬಹುದು.

ನೋಡಿದೆನಲ್ಲಿ
ನಡುನೆತ್ತಿಯಲ್ಲಿ!

ತುಂಬದು ಹೊಟ್ಟೆ;
ತುಂಬದೋ ಹೊಟ್ಟೆ!...

ಈ ರೀತಿ ಒಂದು ಸಾಲನ್ನು ಎರಡು ತುಂಡು ಮಾಡಿರುವುದರಿಂದ ಭಾವದ ಬಳುಕು ಸಹಚವಾಗಿ ಓದುಗನಿಗೆ ತಟ್ಟುವಂತಾಗುತ್ತದೆ. ಇನ್ನು ಕೆಲವೆಡೆ ಒಂದು ಬಿಡಿ ಸಾಲೇ ಒಂದು ಘಟಕವಾಗಿ ಉಳಿಯುತ್ತದೆ.

ಎಲುಬಿನ ಕುದುರೆ! ಎಲುಬಿನ ಆಳು!
ಇವನೆಯೆ ಕಲ್ಕಿ? ಬಡವರ ಬಾಳು?
ಮೂರ್ತಿವೆತ್ತಿಹ ಬಡವರ ಗೋಳು!

ಇಲ್ಲಿಯ ಕೊನೆಯ ಸಾಲು ಸ್ವತಂತ್ರವಾಗಿ ನಿಲ್ಲುತ್ತದೆ. ಮೇಲಿನ ಸಾಲುಗಳ ಅರ್ಥವನ್ನು ಮುಂದುವರಿಸಿಕೊಂಡು ಬಂದಿದೆ.

ಪ್ರತಿ ಎರಡು ಸಾಲುಗಳಿಗೆ ಲಯ ನಿಂತು, ಮತ್ತೆ ಪ್ರಾರಂಭವಾಗುವುದರಿಂದ ಹಾಗೂ ಅಲ್ಲಲ್ಲಿ ಲಯದ ಏರಿಳಿತ ಸಾಲುಗಳಲ್ಲಿ ಸಾಧಿತವಾಗಿರುವುದರಿಂದ ವಸ್ತುವನ್ನು ವೇಗವಾಗಿ ನಡೆಸಲು ಸಾಧ್ಯವಾಗಿದೆ. ಬಹುಪಾಲು ಮೂರು ನಾಲ್ಕು ಮಾತ್ರೆಯ ಗಣದಿಂದ ಎಣೆದಿರುವ ಪದ್ಯದ ಲಯ

ಒಂದು ರೀತಿಯ ಗಂಭೀರತೆಯನ್ನು ಪಡೆದುಕೊಂಡಿದೆ. ವಸ್ತುವನ್ನು ಅಷ್ಟೇ ಗಂಭೀರವಾಗಿಸುವುದು ಇದರಿಂದ ಸಾಧ್ಯವಾಗಿದೆ.

ಈ ಕವನದಲ್ಲಿ ಸರಳ ಭಾಷಾಭಿವ್ಯಕ್ತಿಯನ್ನು ಕಾಣುತ್ತೇವೆ. ಸಂಸ್ಕೃತವೇ ಆಗಲಿ ಕನ್ನಡವೇ ಆಗಲಿ ಪದಗಳು ಎಲ್ಲಿಯೂ ತಲೆ ತಿನ್ನುವುದಿಲ್ಲ. ಇಷ್ಟು ದೀರ್ಘ ಕವನದಲ್ಲಿ ಶಿಥಿಲತೆಗೆ ಅವಕಾಶಕೊಡದೆ, ಕವನವನ್ನು ನಿರ್ವಹಿಸುವ ಈ ಸರಳತೆ ಓದುಗರಿಗೆ ಪ್ರಿಯವಾಗುತ್ತದೆ. 'ಬಿಡುವು''ಹಾದಿ''ಜುಟ್ಟು''ಸೀದುದು''ಬಗ್ಗ' 'ಕಸಕಡ್ಡಿ''ನೆಣದುಂಡೆ'-ಎಂಬ ಪದಗಳು ವಿಶೇಷ ಗಮನ ಸೆಳೆಯುತ್ತವೆ. ಕೆಲವು ಅನುಕರಣ ಶಬ್ದಗಳಂತೂ ವಿಶಿಷ್ಟವಾದ ಭಾವವನ್ನುಕವನಕ್ಕೆ ಒದಗಿಸಲು ಸಹಾಯಕವಾಗಿವೆ. 'ಸುಳಿ ಸುಳಿ' 'ಗಸಗಸ' 'ಧಗ ಧಗ' 'ಭುಗಿಲ್ ಭಗಿಲ್' 'ಧಮು ಧಮು ' 'ಧುಡಂ ಧುಡಂ'ಇತ್ಯಾದಿ ಪದಗಳು ವಸ್ತುವನ್ನು ಅಭಿನಯಿಸಿತೋರುತ್ತದೆ.

ಕುವೆಂಪು ಅವರು ಈ ಕವನದಲ್ಲಿ ಸಕಾಲಿಕ ಸಮಸ್ಯೆಯೊಂದನ್ನು ಬಿಡಿಸುವ ಪ್ರಯತ್ನ ಮಾಡಿದ್ದಾರೆ. ಅದೂ ಸುಮಾರು ದಶಕಗಳ ಹಿಂದೆಯೇ. ಆದರೆ ಈ ಪದ್ಯ ಸಕಾಲಿಕವೂ ಆಗಿ, ಸಮಕಾಲೀನವೂ ಆಗಿ, ಸಾರ್ವಕಾಲಿಕವಾಗಿ ನಿಲ್ಲುವುದರಿಂದ ಇದರ ಮಹತ್ವ ಹೆಚ್ಚುತ್ತದೆ. ಬಡವ ಬಲ್ಲಿದರ ಹೋರಾಟದಲ್ಲೇ ಮಾನವ ಕುಲದ ಇತಿಹಾಸ ಅರಳಿದೆ;ಹೊರಳಿದೆ. ಬಡತನದ ಸಮಸ್ಯೆಸಾವಿರಾರು ವರ್ಷಗಳಿಂದ ಹರಿದು ಬಂದು, ಇಂದಿಗೂ ಹೇಗೆ ಬೃಹತ್ತಾಗಿಯೇ ಉಳಿದಿದೆಯೋ ಹಾಗೆ ಕಲ್ಕಿ ಕವನದ ಮಹತ್ವವೂ ಉಳಿಯುತ್ತದೆ. ಕಲ್ಕಿ ಶ್ರೀಮಂತರ ಶೋಷಣೆಯ ವಿರದ್ಧ ಹೇಳ ಹೊರಡುವ ಕವನ. ಕವಿ ಮತ್ತು ಸಹೃದಯ ಈ ಕವನದಲ್ಲಿ ಕಂಡು 'ಕಲ್ಕಿ'ಯದರ್ಶನ ಮತ್ತು 'ಕಲ್ಕಿ'ಯ ಕ್ರಿಯೆಯನ್ನು ಇಂದಿನ ನಮ್ಮ ಸಮಾಜ ಬಯಸುತ್ತಿದೆ. 'ಕಲ್ಕಿ'ಯ ಕ್ರಿಯೆ ಸಮಾಜಿಕವಾಗಿ ನಡೆದಾಗ ಕುವೆಂಪು ಅವರ ಈ 'ಕಾಣ್ಕೆ'ಯು ಸಫಲವಾಗುತ್ತದೆ.



# ಪ್ರೇತ - ಕ್ಯೂ : ಅನ್ವಯಿಕ ವಿಮರ್ಶೆ

ಪ್ರೇತವೆಂದರೆ ದೇಹವನ್ನು ಬಿಟ್ಟಿರುವ ಜೀವವೆಂದು ಒಂದು ಅರ್ಥವಿದೆ. ಕ್ಯೂ-ಸರದಿಗಾಗಿ ಕಾಯುತ್ತಿರುವ ಜನರ ಸಾಲನ್ನು ಹೇಳುತ್ತದೆ. ಪ್ರೇತ-ಕ್ಯೂ ಎರಡು ಸ್ತರಗಳಲ್ಲಿ ಅರ್ಥಬಿಟ್ಟು ಕೊಡುತ್ತದೆ. ಒಂದು, ದೇಹ ಕಳೆದುಕೊಂಡ ಜೀವ ಮರುದೇಹ ಪಡೆಯಲು ಕ್ಯೂ ನಿಂತ ಚಿತ್ರ, ಎರಡು, ಪ್ರೇತ ಎಂಬ ಪದದ ಅರ್ಥ ತಂದು ಕೊಡುವ ಭಾರತೀಯ ಜನ್ಮಾಂತರ ಕಲ್ಪನೆಯ ಚಿತ್ರ. ಇವೆರಡು ಪರಸ್ಪರ ಪೂರಕವಾದರೂ, ಕವಿದೃಷ್ಟಿ-ನಂಬಿಕೆಯಲ್ಲಿ ಸತ್ಯವಾದರೂ ಪ್ರೇತ ಎಂಬ ಮಾತಿಗೆ 'ಪಿಶಾಚಿ'ಎಂಬ ಅರ್ಥವೂ ಇರುವುದರಿಂದ, ಪ್ರಸ್ತುತ ವಸ್ತುವಿಗೆ ಅದು ಕೊಡುವ ತಿರುವು ಸಹೃದಯನ ಮೇಲೆ ಅಸಾಧಾರಣ ಪರಿಣಾಮದ ಅಲೆಗಳನ್ನೆಬ್ಬಿಬಸುತ್ತದೆ.

ಕುವೆಂಪು ಮೂಲತಃ ಸಾಮಾಜಿಕ ಅರಿವಿನಿಂದ ಬರೆಯುವ ಕವಿ. ಅವರು ನೋಡುವ ಗಿಡ ಮರ ಕಲ್ಲು ನದಿ ಇತ್ಯಾದಿ ಪ್ರಾಕೃತಿಕ ವಿಷಯವೇ ಆಗಲಿ, ಅದರ ಆಸ್ವಾದನೆ, ಸಂವೇದನೆ ಮತ್ತು ಅಭಿವ್ಯಕ್ತಿಗಳಲ್ಲಿ ಸಮಾಜ ಜೀನಿಯ ಬದುಕಿವ ಗೂಢ-,ಸೂಕ್ಷ್ಮ ರಹಸ್ಯಗಳನ್ನು ಕೆದಕುವುದೇ ಆಗಿರುತ್ತದೆ. ಅದು ಒಂದರ್ಥದಲ್ಲಿ ಕವಿ ಪ್ರತಿನಿಧಿಸುವ ಜನಾಂಗದ ಆತ್ಮ ಶೋಧನೆಗೆ ಸಾಧನ ವಾದರೆ, ಮತ್ತೊಂದರ್ಥದಲ್ಲಿ ಕವಿಯು ವ್ಯಕ್ತಿವಿಕಾಸದ ಗತಿಯಲ್ಲಿ ಸ್ವತಃ ಶೋಧಿಸಿಕೊಳ್ಳುವ ರೀತಿ. ಈ ಕಾರಣಗಳಿಂದ ಕುವೆಂಪು ಹೇಗೆ ಮಹಾಕಲಾವಿದರಾಗಿದ್ದಾರೋ ಹಾಗೆಯೇ ವಾಸ್ತವಿಕವಾದಿ ಗಳಾಗಿಯೂ ಅವರ ಕೃತಿಗಳಲ್ಲಿ ಕಾಣುತ್ತಾರೆ. ಈ ಬದುಕಿನ ಬಗೆಗಿರುವ ಕಳಕಳಿ, ಆಸ್ಥೆ, ಅರಿವು ಕವನಗಳಲ್ಲಿ ದಟ್ಟವಾಗಿ ಮೂರ್ತಗೊಂಡಿವೆ. ಹೀಗಾಗಿ ಕುವೆಂಪು ತಮ್ಮ ಕವನಗಳ ವಸ್ತು (content)ವಿನ ಕಡೆ ಕೊಡುವ ನಿಗ ಗಮನಾರ್ಹವಾದುದು. ಈ ಒಂದು ಪ್ರಕ್ರಿಯೆಯಲ್ಲಿ ಸೃಷ್ಟಿಗೊಂಡ ಕುವೆಂಪು ಅವರ ಬಹುಪಾಲು ಕವನಗಳು ಸಾಮಾಜಿಕವಾಗಿ ಮಹತ್ವದವಾಗುತ್ತವೆ.

**ಪ್ರೇತ - ಕ್ಯೂ** ಇತ್ತೀಚಿನ ಸೃಷ್ಟಿ-ಸಕಾಲಿಕ ಸೃಷ್ಟಿ. ಪ್ರಸ್ತುತ ಸಾಮಾಜಿಕ ಪಿಡುಗಾದ ಜನಸಂಖ್ಯೆಯ ಉಬ್ಬರದ ಮೇಲೆ ರಚಿತವಾದ ಕವನ. ಕುವೆಂಪು ಸಮಕಾಲೀನಕ್ಕೆ ಎಂದೂ ಕಣ್ಣು ಮುಚ್ಚಿ ಕುಳಿತವರಲ್ಲ. ಅಂದಂದು ಜನರನ್ನು ಕಿತ್ತುತಿನ್ನುವ ಸಮಸ್ಯೆಗಳ ಬಗ್ಗೆ ತಮ್ಮ ಸಾಹಿತ್ತಿಕ ಅಭಿವ್ಯಕ್ತಿಗಳಿಂದ ರೂಪ ಕೊಟ್ಟಿದ್ದಾರೆ. ಕವಿತನ್ನ ವಿಶಿಷ್ಟ ಸಂವೇದನಾಶೀಲತೆಯಿಂದ ಕಂಡುಕೊಂಡು ಅಭಿವ್ಯಕ್ತಿಕೊಟ್ಟಿರುವ ಈ ಕವನ ತುಂಬಾ ಅಲಿಪ್ತತೆಯಿಂದ ಕೂಡಿದ್ದು ಕಾವ್ಯಸಂಯಮಕ್ಕೆ ಮಾದರಿಯಾಗಿದೆ. ವಸ್ತು ರೂಪ ಭಾಷೆ ಛಂದಸ್ಸು-ಎಲ್ಲದರಲ್ಲೂ ಆನಿವಾರ್ಯತೆಯನ್ನು ಪಡೆದುಕೊಂಡ

ರಚನೆಯಾಗಿದೆ. ವಸ್ತುವಿನ ವಿನೂತನತೆ, ಶೈಲಿಯಲ್ಲಿರುವ ವಿಶಿಷ್ಟ ಬಿಗಿ, ಅಲ್ಲಲ್ಲಿ ಕಾವ್ಯಧ್ವನಿಗೆ ಸಂಚಾರಿಗಳಾಗಿ ಬರುವ ಶಕ್ತ ಸಾಂಕೇತಿಕತೆಗಳು-ಈ ಕವನದ ವೈಶಿಷ್ಟ್ಯಗಳಾಗಿ ನಿಂತು ಕವನವನ್ನು ನಡೆಸಿಕೊಟ್ಟಿವೆ.

ಕವನದ ಪ್ರಾರಂಭವೇ ಓದುಗನನ್ನು ಆಕರ್ಷಿಸುತ್ತದೆ; ಅಶಕ್ತಿ ತಳೆಯುವಂತೆ ಪ್ರೇರೇಪಿಸುತ್ತದೆ. ಕವಿ ಬಳಸುವ ಸಂಬೋಧನಾತ್ಮಕ ತಂತ್ರವಸ್ತು ಮತ್ತು ಸಹೃದಯರ ನಡುವೆ ಆತ್ಮೀಯ ಸಂವಾದವನ್ನುಂಟು ಮಾಡುತ್ತದೆ. ಈ ಸಂವಾದ ಕವನದ ಉದ್ದಕ್ಕೂ ಬೆಳೆಯುವುದರಿಂದ ಕವನದ ಒಳಪದರಗಳು ಸಹೃದಯನಿಗೆ ನಿಚ್ಚಳವಾಗುತ್ತ ನಡೆದು ಹೆಚ್ಚು ಆಳವಾಗುತ್ತದೆ. ಸಂಬೋಧನಾತ್ಮಕ ಧಾಟಿ ಕವನದಲ್ಲಿ ನಾಟಕೀಯ ತಿರುವು ತಕ್ಕೊಳ್ಳುವುದರಿಂದ ಕವನ ರೂಪಕ ಸ್ತರಕ್ಕೂ ಏರುತ್ತದೆ. ಕವಿ ಮತ್ತು ಅವನು ಉದ್ದೇಶಿಸಿ ಮಾತನಾಡುತ್ತಿರುವ 'ನತದೃಷ್ಟ ಜೀವಗಳು' ಮುಖ್ಯ ಪಾತ್ರಗಳಾದರೆ ಸಹೃದಯ ಸಾಕ್ಷಿಪ್ರಜ್ಞೆಯ ಪ್ರೇಕ್ಷಕನಾಗುತ್ತಾನೆ. ಇಲ್ಲಿ ಬರುವ 'ಜೀವಗಳು' ಸ್ವತಃ ಮಾತನಾಡದಿದ್ದರೂ ಕವಿಯ ಮಾತಿನಲ್ಲೇ ಅಭಿನಯಗೊಳ್ಳುತ್ತವೆ. ಇದರಿಂದಾಗಿ, ಕವಿ ಪಾತ್ರ ಮತ್ತು ನಿರೂಪಕನಾಗಿ ಯಾವ ದ್ವಂದ್ವವೂ ಬಿರುಕೂ ಬಾರದಂತೆ ಕವನವನ್ನು ನಿರ್ವಹಿಸಲು ಸಾಧ್ಯವಾಗಿದೆ.

'ಕ್ಯೂನಿಂತು' 'ಜನ್ಮಧಾರಣೆಗೆ'ನುಗ್ಗುತ್ತಿರುವ ಜೀವಗಳಿಗೆ ಇಲ್ಲಿಯ ಬದುಕಿನ ಕರಾಳತೆಯನ್ನು ತಿಳಿಸುವುದರ ಮೂಲಕ ಓದುಗನಿಗೆ ಸಾಮಾಜಿಕ ಸಮಸ್ಯೆಯೊಂದರತ್ತ ಗಮನ ಹರಿಯುವಂತೆ ಮಾಡುವುದೇ ಇಲ್ಲಿನ ವಸ್ತು. 'ಭೂಮಿ ತುಂಬೆಲ್ಲ ಜನಸಂಖ್ಯೆ ಏರಿ ಕಿಕ್ಕಿರಿದು ಮೀರಿ' ತುಂಬಿದೆ. ಇಲ್ಲಿಯವರಿಗೇ ಹೊಟ್ಟೆಗಿಲ್ಲ. ಕೇವಲ ಭೂಮಿಯಲ್ಲಿ ಹುಟ್ಟಿದರೆ ಸಾರ್ಥಕವಾಯಿತೆ? ಇಲ್ಲಿಯವರಿಗೇ ಜಾಗವಿಲ್ಲದೆ, ಹೊಟ್ಟೆಗಿಲ್ಲದೆ ಹತ್ಯೆಯ ವಿವಿಧ ಮಾರ್ಗಗಳಲ್ಲಿ ಅತ್ತಕಡೆಗೇ ಬರುತ್ತಿರುವಾಗ ನೀವೇಕೆ ಬರುವಿರಿ ಎಂದು ಕವಿ ಜೀವಗಳನ್ನು ಪ್ರಶ್ನಿಸುತ್ತಾರೆ ಇತ್ತ ಕಡೆ ಬರುವಂಥ ಆತಂಕ ತಾನೆ ಏನು ಬಂದಿದೆ ನಿಮಗೆ? ಇಲ್ಲಿ ಎಂಥ ಘೋರತರ ನರಕವಿದೆಯೆಂದು ನಿಮಗೆ ತಿಳಿಯದೆಂದು ಕವಿ ತಿಳಿಹೇಳುತ್ತಾರೆ. ಕವಿ ವಿಷಾದದಿಂದ ಹೇಳುವ ಈ ಮಾತುಗಳು ಪಡೆದು ಕೊಂಡಿರುವ ಅರ್ಥವಂತಿಕೆ ಸಾಲುಸಾಲುಗಳಸಲ್ಲಿ ಮಡುಗಟ್ಟಿ ಕವನ ಅತ್ಯಂತ ವಿಷಾದಮಯತೆ ಯಲ್ಲಿ ಅಂತ್ಯವಾಗುವಂತೆ ಮಾಡಿದೆ. ಈ ವಿಷಾದಮಯತೆಯೇ ಸತ್ಯವಾಗಿ, ಸಾಮಾಜಿಕ ಜೀವನದ ಮೇಲೆ ಬೆಳಕು ಚೆಲ್ಲಿ, ಯಾವುದು ನಿಜವೋ ಅದರ ಶೋಧನೆಗೆ ತೊಡಗುವಂತೆ ಓದುಗನನ್ನು ಉದ್ದೀಪಿಸುತ್ತದೆ. ಈ ಘಟ್ಟದಲ್ಲಿ ಕವನದ ಸಾರ್ಥಕತೆ ನಿಂತಿರುವುದು ತೋರುತ್ತದೆ.

ಕವನ ಅನಿವಾರ್ಯವಾಗಿ ಪಡೆದುಕೊಂಡಿರುವ ಸಾಹಿತ್ತಿಕ ಬಂಧ ಕವನದ ವಸ್ತುವನ್ನು ಹೆಚ್ಚು ಸಂಕೀರ್ಣಗೊಳಿಸಿದೆ. ನಾನು ಮೇಲೆ ಹೇಳಿದ ಕುವೆಂಪು ಅವರ ವಸ್ತುಪ್ರಜ್ಞೆಯನ್ನು ಈ ಕವನದುದ್ದಕ್ಕೂ ಗುರುತಿಸಬಹುದು. ಯಾವುದೇ ಒಂದು ವಸ್ತುವನ್ನು ಸಾಹಿತ್ಯ ಮಾಡಬೇಕೆಂದು ಬರೆಯಹೊರಟಾಗ, ಸಾಹಿತ್ತಿಕ ಗುಣಗಳೇ ಬಲವಾಗಿ ವಸ್ತುವನ್ನು ನುಂಗಿಹಾಕುತ್ತವೆ. ಕುವೆಂಪು ಅವರಲ್ಲಿ ಈ ತೊಂದರೆಯಿಲ್ಲ. ಕುವೆಂಪು ಪ್ರಧಾನತಃ ಈ ಬದುಕಿನ ಕವಿಯಾದ್ದರಿಂದ ಅಭಿವ್ಯಕ್ತಿಯ

ಪರಿಕರಗಳು ಸಹಸಲೀಸಾಗಿ ಒಲಿಯುತ್ತವೆ. ಈ ಕಾರಣದಿಂದಾಗಿ ಕುವೆಂಪು ಅವರಲ್ಲಿ ಎಲ್ಲಿಯೂ ಅಭಿವ್ಯಕ್ತಿಯ ತೊಡಕು ಕಾಣುವುದಿಲ್ಲ.

ಯಾಕಿಂತು
ಕ್ಯೂನಿಂತು
ನುಗ್ಗುತ್ತಿರುವಿರಿ ಜನ್ಮಧಾರಣೆಗೆ,
ಓ ನತದೃಷ್ಟ ಜೀವಗಳಿರಾ?

ಕವನ ಪ್ರಾರಂಭವಾಗುವುದು ಹೀಗೆ. 'ಯಾಕಿಂತು'ಎಂದು ಹಾಕುವ ಪ್ರಶ್ನೆಯೇಇಡೀ ಕವನದ ಪ್ರನಿಧ್ವನಿಯಾಗಿ ಓದುಗನನ್ನುಆವರಿಸುತ್ತದೆ. ಮೊದಲ ನಾಲ್ಕು ಸಾಲುಗಳೇ ಕವನದ ಕೊನೆಯ ಮುಕ್ತಾಯ ಚರಣಗಳೂ (ಓ ನತದೃಷ್ಟ ಜೀವಗಳಿರಾ? 'ಕೊನೆಯಲ್ಲಿ ಓ ನತದೃಷ್ಟ ಪ್ರೇತಗಳಿರಾ? ಆಗಿದೆ. ಅದರ ವಿವೇಚನೆ ಮುಂದೆ ಇದೆ.) ಆಗಿರುವುದರಿಂದ ಇಡೀ ಕವನ ಎರಡು ಪ್ರಶ್ನೆಗಳ ಮಧ್ಯೆ ನಿಂತು ಆಶ್ಚರ್ಯವಾಗುತ್ತದೆ. ಇಲ್ಲಿ ಆಶ್ಚರ್ಯ ಎಂಬ ಪದವನ್ನು ಏಕೆ ಬಳಸಿದೆಯೆಂದರೆ ಜೀವದ 'ಅವಸರ' ಕಂಡು ಕವಿಗಾದ ಆಶ್ಚರ್ಯವೇ ಕವನದ ವಸ್ತುವನ್ನು ಸೃಷ್ಟಿಸಿದೆ. ಕವಿಗೆ ಈ ಬದುಕಿನ ಬರ್ಬರತೆ ಗೊತ್ತು. ಇಲ್ಲಿ ಬದುಕುವುದು ತೀರಾ ದುಃಖಮಯ. ಇಂಥ ವಾತಾರವಣಕ್ಕೆ 'ನುಗ್ಗಿ' ಬರುತ್ತಿರುವ ಜೀವಗಳನ್ನು ಕುರಿತು ಯೋಚಿಸಿದಾಗ ಕವಿಗೆ ಆಶ್ಚರ್ಯ ಮೂಡುತ್ತದೆ. ಆದರೆ ಇಲ್ಲಿ ಬರುವ ಆಶ್ಚರ್ಯ ಕೇವಲ ಆಶ್ಚರ್ಯವಾಗಿ ನಿಲ್ಲದೆ, ಆ ಜೀವಗಳ ಬಗ್ಗೆ ಮತ್ತು ಇಲ್ಲಿನ ಬದುಕಿನ ವಿಷಣ್ಣತೆಯ ಬಗ್ಗೆ ಹಾಕುವ ಪ್ರಶ್ನೆಯಾಗಿಯೂ ನಿಲ್ಲುವುದರಿಂದ ಕವನಕ್ಕೆ ವಿಶಿಷ್ಟ ಒತ್ತು ಈ ಹಂತದಲ್ಲಿ ಬರುತ್ತದೆ. ಇಲ್ಲಿ ಬರುವ 'ಕ್ಯೂ' ಶಿಸ್ತಿಗೆ ಸಂಕೇತವಾದರೂ 'ನುಗ್ಗು'ಅಶಿಸ್ತಿಗೆ ಸಂಕೇತವಾಗಿ-ಪರಸ್ಪರ ಅಸಾಂಗತ್ಯ ಸೃಷ್ಟಿಗೊಂಡು ಜೀವಗಳಿರುವ ಅಪಕ್ವಮತಿಯನ್ನು ತಿಳಿಸುತ್ತವೆ. ಶಿಸ್ತು, ಸಂಯಮಗಳಿದ್ದಿದ್ದರೆ ವಿವೇಕವಿರುತ್ತಿತ್ತು. ವಿವೇಕವಿದ್ದಿದ್ದರೆ ಹೀಗೆ ನುಗ್ಗುತ್ತಿರಲಿಲ್ಲ ಎಂಬ ಅರ್ಥ ಹೊರಡುತ್ತದೆ. 'ಜನ್ಮಧಾರಣೆ'ಭಾರತೀಯರ ದೃಷ್ಟಿಯಲ್ಲಿ ಪವಿತ್ರವಾದ ಕಾರ್ಯ. ಇದು ಪರಂಪರಾಗತ ದೃಷ್ಟಿ. ಕುವೆಂಪು ಅದನ್ನು ಪ್ರಶ್ನಿಸಿದ್ದಾರೆ. ಒಂದು ಕಾಲಕ್ಕೆ ಪವಿತ್ರ ವೆನಿಸಿದ್ದ ಮೌಲ್ಯ ಮತ್ತೊಂದು ಕಾಲಕ್ಕೆ ಅರ್ಥಹೀನವೆನ್ನಿಸಬಹುದು. ಕವಿಗೆ ಅದರ ಗಾಢ ಅರಿವಿದೆ. ಆದ್ದರಿದಂಲೇ 'ಜನ್ಮಧಾರಣೆ' ಎಂಬ ಪದದ ಮೇಲೆ ವಿಶೇಷ ಒತ್ತು ಕೊಟ್ಟು, ಮುಂದಿನ ಪದ ಬಳಕೆಯಿಂದ ಅದನ್ನು ನಿಷ್ಪ್ರಯೋಜಕವೆಂದು ತೋರಿಸುತ್ತಾರೆ. 'ನತದೃಷ್ಟ ಜೀವಗಳಿರಾ?'-ಚರಣ ಕ್ಯೂನಿಂತು ನುಗ್ಗುತ್ತಿರುವ ಕ್ರಿಯೆಗೆ ಮುಕ್ತಾಯ ಹಾಡುತ್ತದೆ. ಈ ಕ್ಯೂ, ನುಗ್ಗುವಿಕೆ-ಎಲ್ಲವೂ 'ಜನ್ಮಧಾರಣ, ಕ್ರಿಯೆಗೆ ನಡೆಯುವ ಹೋರಾಟ. ಆದರದು ವಿಫಲ ಹೋರಾಟ. ಏಕೆಂದರೆ ಈ ಜೀವಗಳು 'ನತದೃಷ್ಟರು.''ನತದೃಷ್ಟರು'ಮಾತು ಅರ್ಥಪೂರ್ಣ. ಇಲ್ಲಿನ ಬದುಕು ಜನ್ಮಧಾರಣೆಗೆ ಯೋಗ್ಯವಲ್ಲದ್ದು. ಮೋಸ ವಂಚನೆಗಳು ಸಾಮಾಜಿಕ ವಿವಿಧ ಸ್ತರಗಳಲ್ಲಿ ಇಂದು ತಾಂಡವ ವಾಡುತ್ತಿವೆ. ಸಾಮಾಜಿಕ, ಆರ್ಥಿಕ, ರಾಜಕೀಯ, ಬೌದ್ಧಿಕ ರಂಗಗಳಲ್ಲಿ ಅಪ್ರಮಾಣಿಕತೆ ರಾಜ್ಯ

ವಾಳುತ್ತಿದೆ. ಇಂದು ಜನಿಸಿದರೂ ಅವುಗಳಲ್ಲಿ ಸಿಕ್ಕು ನರಳಬೇಕಾಗುತ್ತದೆ. ನಿಜವಾದ ಸತ್ಯಾಸತ್ಯ ಜಿವನದ ಚಾರುತನವನ್ನೂ ಸವಿಯಲಾಗದಂತೆ ಬದುಕು ಕೊಳಕಾಗಿದೆ. ಆದ್ದರಿಂದ ಈ ಜೀವಗಳು ಇಲ್ಲಿ ಜನಿಸಲು ಅದೃಷ್ಟವಿಲ್ಲದವರು.

ಈ ಹಂತದಲ್ಲಿ ಮೇಲಿನ ಚರಣಗಳ ಅರ್ಥ ವಿನ್ಯಾಸಗಳು ಹರಡಿ ನಿಂತು ಓದುಗರನ್ನೂ ನತದೃಷ್ಟ ಜೀವಗಳನ್ನೂ ಜೊತೆ ಜೊತೆಯಲ್ಲಿಯೇ ಕುತೂಹಲಕ್ಕೀಡು ಮಾಡುತ್ತವೆ. ಕುತೂಹಲ ಧುತ್ತನೆ ಮೂಡಿ , ಕವನದ ಮುಂದಿನ ಸಾಲುಗಳಕಡೆಗೆ ಓದುಗ ತಕ್ಷಣ ಆಸಕ್ತಿ ತೆಳಯುತ್ತಾನೆ.

ನಿಮಗೆ ಕಾಣುವುದಿಲ್ಲ?
ಭೂಮಿ ತುಂಬೆಲ್ಲ
ಜನಸಂಖ್ಯೆ ಏರಿ ಕಿಕ್ಕಿರಿದು ಮೀರಿ,
ಕಂಕಾಲ ಪಂಕ್ತಿ, ಹೊಟ್ಟೆಗಿಲ್ಲ !

ಮೊದಲ ಚರಣಗಳಿಗೆ ಈ ಚರಣಗಳು ಉತ್ತರವೂ ಆಗುತ್ತವೆ.ಮೊದಲ ಚರಣಗಳಲ್ಲಿ ಕಂಡು ಬರುವ ಬಿರುಸಿಗೆ ಬದಲಾಗಿ ಇಲ್ಲಿನಯವಂತಿಕೆ ಇದೆ. 'ನಿಮಗೆ ಕಾಣುವುದಿಲ್ಲ?' ಎಂಬ ಮಾತು ಎಷ್ಟು ಮೆತ್ತಗೆ ಕಿವಿಗೆ ಕೇಳಿ ಬರುತ್ತದೋ , ಅಷ್ಟೆ ಭಯಂಕರವಾಗಿ ಈ ನೆಲದ ವಾಸ್ತವಿಕ ಕಟುಸತ್ಯವನ್ನು ತಿಳಿಸುತ್ತದೆ. 'ಕಾಣು' ದೃಷ್ಟಿಯನ್ನು ನೆನಪಿಗೆ ತರುವಂಥದು. ಕಾಣುವುದಿಲ್ಲ? ಎಂಬಲ್ಲಿರುವ ಪ್ರಶ್ನಾರ್ಥಕ ಮನೋಭಾವ ಜೀವಗಳ ಅಜ್ಞಾನವನ್ನು ಲೇವಡಿ ಮಾಡುತ್ತದೆ. ಜೊತೆಗೆ ಏಕಕಾಲದಲ್ಲಿ ಇಲ್ಲಿರುವ ಜನತೆಯೂ ಕೂಡ ದಡ್ಡರು ಎಂಬುದನ್ನು ಬಳಸಿ ಬಳಸಿ ಅನುಭವಕ್ಕೆ ತರುವಂತೆ ಮಾಡುತ್ತಾರೆ, ಕವಿ. ಇಲ್ಲಿಯ ಜನ ಜೀವಗಳ ಬರುವಿಕೆಗೆ ಕುರಡರಂತೆ ಅನುವು ಮಾಡಿಕೊಡುತ್ತಿದ್ದಾರೆ. ಈ ಬದುಕಿನಲ್ಲಿರುವ ಅಸಮಾನತೆ ಜಾತಿ-ದ್ವೇಷ, ಪ್ರತಿಯೊಂದು ರಂಗದಲ್ಲೂ ವ್ಯಾಪಿಸಿರುವ ಕೆಟ್ಟ ರಾಜಕೀಯ -ಬದುಕಲು ಅಸಹ್ಯಕರವೆನಿಸಿರುವ ವ್ಯವಸ್ಥೆ ನಿಮಗೆ ಕಾಣುವುದಿಲ್ಲವೆ? ಎಂಬುದು ಕವಿಯ ಕಳಕಳಿಯ ಪ್ರಶ್ನೆಯಾಗಿ ನಿಲ್ಲುತ್ತದೆ.

ಭೂಮಿ ತುಂಬೆಲ್ಲ ಜನಸಂಖ್ಯೆ ಏರಿ ಕಿಕ್ಕಿರಿದು ಮೀರಿದೆ. ಇದು ಸತ್ಯ . ಈ ಸತ್ಯವನ್ನು ಕವಿ ಎರಡು ಪದಗಳ ಬಳಕೆಯಿಂದ ವಿಶೇಷ ಒತ್ತು ಕೊಟ್ಟು ತಿಳಿಸುತ್ತಾರೆ. ತುಂಬಾ ಕಿಕ್ಕಿರಿದು ತುಂಬಾ ಏರಿದೆ, ಕಿಕ್ಕಿರಿದು ಮೀರಿದೆ. ಏರಿ ಮೀರಿದ ಮೇಲೆ ಈ ಭೂಮಿಯ ಮೇಲೆ ಜಾಗವಿಲ್ಲವಂದೇ ಅರ್ಥ. ಇಲ್ಲಿಯವರಿಗೆ ಜಾಗವಿಲ್ಲ. ನೀವೇಕೆ ಬಂದು ನರಳುವಿರಿ ಎಂದು ಹೇಳಲು ಕವಿ ಮೇಲಿನ ಎರಡು ಪದಗಳನ್ನು ಬಳಸುವುದರಿಂದ, ಅವು ತಂದುಕೊಡುವ ವಾಸ್ತವಿಕತೆಯ ಅರಿವು, ಸಹೃದಯ ಬದುಕಿನ ಬಗ್ಗೆ ತಾಳಬೇಕಾದ ವಿವೇಕಯುತವಾದ, ಮಾರ್ಗವನ್ನು ತೋರಿಸುತ್ತದೆ. ಕವಿ ಬಳಸುವ ಮುಂದಿನ ಮಾತುಗಳು ಅತಿ ಧಾರುಣವಾಗಿದ್ದು, ವಾಸ್ತವಿಕ ದುರಂತತೆಯನ್ನು ಅರ್ಥಪೂರ್ಣವಾಗಿ ಹಿಡಿದಿಡುತ್ತವೆ. 'ಕಂಕಾಲ ಪಂಕ್ತಿ' ಹೊಟ್ಟೆಗಿಲ್ಲ! ಹೊಟ್ಟೆಗಿಲ್ಲದ ಪಂಕ್ತಿ ನಿಮಗೆ ಕಾಣುವುದಿಲ್ಲ? ಎಂಬ ಕವಿಯ ಮಾತಿನಲ್ಲಿ ವಿಶೇಷ ಅರ್ಥವಿದೆ. 'ಕಂಕಾಲ ಪಂಕ್ತಿ' ಎಂದರೆ ಅಸ್ಥಿ ಪಂಜರಗಳ

ಸಾಲು. ಭೂಮಿಯಲ್ಲಿರುವ ಜನರು ಅಸ್ಥಿಪಂಜರಗಳಾಗಿರಬೇಕಾದರೆ ಇಲ್ಲಿನ ಪರಿಸ್ಥಿತಿ ಎಂಥದು? ಕಂಕಾಲ ಪಂಕ್ತಿ ಪರಿಸ್ಥಿತಿಯ ಧಾರುಣತೆಯನ್ನು ಗಮನಕ್ಕೆ ತಂದು ಮತ್ತೆ ಈ ಭೂಮಿಯಲ್ಲಿ ಜನ್ಮದಾರಣೆ ಯಾಗುವುದನ್ನು ನಿಷೇಧಿಸುತ್ತದೆ. ಇಲ್ಲಿಯ 'ಪಂಕ್ತಿ' ಎಂಬ ಮಾತು ಕವನದ ಪ್ರಾರಂಭದಲ್ಲಿ ಬರುವ 'ಕ್ಯೂ' ಮಾತಿಗೆ ಅರ್ಥಪೂರ್ಣವಾಗಿ ಹೊಂದಿಕೊಂಡು ಹೊಸ ಧ್ವನಿ ಯೊಂದನ್ನು ಹೊರಡಿಸುತ್ತದೆ . ನುಗ್ಗುತ್ತಿರುವ ಕ್ಯೂ ಜನ್ಮಧಾರಣೆ ಮಾಡಿ ಬಂದಲ್ಲಿ, ನಾಳೆ ಈ ಹೊಟ್ಟೆಗಿಲ್ಲದೆ ನರಳುವ ಕಂಕಾಲ ಪಂಕ್ತಿ ಯಾಗಬೇಕಾಗುತ್ತದೆ ಎಂದು ಜೀವಗಳ ಭವಿಷ್ಯತ್ತಿನ ಬಗ್ಗೆ ಕವಿ ಬೆಳಕು ನೀಡುತ್ತಾರೆ . ಹೀಗೆ, ಇಲ್ಲಿ ಕವಿ ಪಂಕ್ತಿ ಮತ್ತು ಕ್ಯೂ ಪದಗಳನ್ನು ತುಂಬಾ ಎಚ್ಚರಿಕೆಯಿಂದ ಬಳಸಿ , ಅದರಿಂದ ಕವನಕ್ಕೊಂದು ವಿಶಿಷ್ಟ ಮೆರಗು ಬರುವಂತೆ ಮಾಡಿದ್ದಾರೆ.

ಮೇಲಿನ ಸತ್ಯ ಅರಿವಿಗೆ ಬಂದರೆ ಜೀವಗಳು ಜನ್ಮಧಾರಣೆಗೆ ಆಶಿಸಲಾರವು . ಆದರೆ ಅವಕ್ಕೆ ವಿವೇಕವಿಲ್ಲವೆಂದು ವಿಡಂಬನೆ ಮಾಡುತ್ತಾರೆ. ಇಲ್ಲಿಯ ವಿಡಂಬನೆ ಹರಿತವಾಗಿದ್ದು ಆತ್ಮಶೋಧನೆಯನ್ನು ಮಾಡಿಕೊಳ್ಳುವಂತೆ ತೊಡಗಿಸುತ್ತದೆ.

ಏನು ಅವಸರ ನಿಮಗೆ?
    ಯಾವ ಗರ್ಭವೋ ಏನೋ?
    ಯಾರ ಯೋನಿಯೋ ಏನೋ?
    ಅಂತು ಹುಟ್ಟಿದರಾಯ್ತು ಭೂಮಿಯಲ್ಲಿ!

ಮೊದಲು ಎಂಟು ಚರಣಗಳಷ್ಟು ಬಿಗಿಯಾದ ಅರ್ಥಪೂರ್ಣವಾದ ಚರಣಗಳಿವಲ್ಲ ವಾದರೂ ಜೀವಿಗಳ ಅವಿವೇಕತನವನ್ನು ಸಶಕ್ತವಾಗಿ ಹೇಳುತ್ತವೆ. 'ಯಾವ' ಮತ್ತು 'ಯಾರ' ಎಂಬ ಮಾತುಗಳಲ್ಲಿರುವ ಪಶುತ್ವ ಮತ್ತು ಮನುಷ್ಯತ್ವಗಳು ಮಾನವನ ಮೂಲಭೂತ ಅಂಶವೊಂದರ ಮೇಲೆ ಬೆಳಕು ಚೆಲ್ಲುತ್ತವೆ. ವ್ಯಕ್ತಿಯಲ್ಲಿರುವ ಮಾನವೀಯತೆ ಮರೆಯಾಗಿ ಪಶುತ್ವ ಬೆಳೆಯುವ ಪ್ರಕ್ರಿಯೆಗೆ ಜನಸಂಖ್ಯೆಯ ಹೇರಳ ಹೆಚ್ಚುವಿಕೆಯೂ ಒಂದು ಕಾರಣವೆಂಬುದನ್ನು ಗಮನಕ್ಕೆ ತರುತ್ತವೆ. ನುಗ್ಗಿ ಜನ್ಮಧಾರಣೆಗೊಂಡರೆ , ಕಂಕಾಲ ಪಂಕ್ತಿಯ ಹೋರಾಟದಲ್ಲಿ 'ಯಾವ' 'ಯಾರ' ಪಲ್ಲಟಗೊಳ್ಳಲೂಬಹುದು. ಯಾವ ಗರ್ಭವೋ ಏನೋ? ಯಾರ ಯೋನಿಯೋ ಎನೋ? ಅಂತೂ ಹುಟ್ಟಿದರಾಯ್ತು ಭೂಮಿಯಲ್ಲಿ ! ಎಂಬಲ್ಲಿರುವ ವಿಡಂಬನೆ , ಅಪಹಾಸ್ಯ ಕವನದ ವಸ್ತುವಿಗೆ ಪೂರಕವಾಗಿ ಕೆಲಸ ಮಾಡುತ್ತದೆ. ಈ ವಿಡಂಬನೆಯಿಂದಾಗಿ ಕವನದ ಚಿಂತನಾಂಶ ಪ್ರಖರವಾಗುತ್ತದೆ.

ಕವಿ ಇಲ್ಲಿ ಸ್ವಕಾಲಿಕ ಸಮಸ್ಯೆಯೊಂದನ್ನು ಕುರಿತು ಬರೆಯುತ್ತಿದ್ದರೂ ಅದೇವೇಳೆಯಲ್ಲಿ ಮುಂದಿನ ಜನಾಂಗವೊಂದರ ಭವಿಷ್ಯತ್ತಿನ ಬಗ್ಗೆ ಚಿಂತಿಸುತ್ತಿರುತ್ತಾರೆ. 'ಅಂತು ಹುಟ್ಟಿದರಾಯ್ತು ಭೂಮಿಯಲ್ಲಿ' ಎಂಬಲ್ಲಿ ವ್ಯಕ್ತವಾಗುವ ಭಾವನೆ ಹುಟ್ಟುವ ಕ್ರಿಯೆಯ ಬಗೆಗೆ ಕವಿ ತಾಳಿರುವ ಧೋರಣೆಯನ್ನು ತಿಳಿಸುತ್ತದೆ. ಹುಟ್ಟುವ ಕ್ರಿಯೆ ಸಾರ್ಥಕವಾಗಬೇಕು :ನಿರರ್ಥಕವಾಗಬಾರದು ಎಂದು ತಳೆದಿರುವ ಧೋರಣೆ ವೈಚಾರಿಕವಾಗಿದ್ದು, ವೈಜ್ಞಾನಿಕ ಬೆನ್ನೆಲುಬನ್ನು ಪಡೆದುದಾಗಿದೆ.

ಸನಾತನ ಮೌಲ್ಯವೊಂದರ ಶೋಧನೆ ಮಾಡುತ್ತ, ಅದರ ತೆಕ್ಕೆಗೊಳಗಾಗದೆ ಕುವೆಂಪು ಗುರಿ ಸಾಧಿಸುತ್ತಾರೆ. ಈ ವೈಜ್ಞಾನಿಕ ಮತ್ತು ವಾಸ್ತವಿಕ ಅರಿವಿನಿಂದಲೇ ಕುವೆಂಪು ಜೀವಗಳನ್ನು, ಏನು ಅವಸರ ನಿಮಗೆ?ಎಂದು ಪ್ರಶ್ನಿಸುವುದು.

ಕವನದ ಮುಂದಿನ ನಡೆಯ ರೀತಿಯೇ ಬೇರೆ. ಅದರ ಬಂಧದ ಸೊಗಸಿನಿಂದ, ಈ ನೆಲದ ಮೇಲಿನ ಜನಸಂದಣಿಯನ್ನು ಪ್ರಭಾವಯುತವಾಗಿ ಚಿತ್ರಿಸುತ್ತದೆ, ಉಸಿರು ಕಟ್ಟಿಹುದೇನು ನಿಮಗೆ ಅಲ್ಲಿ, ಎಂದು ಜೀವಗಳನ್ನು ಪ್ರಶ್ನಿಸುವಾಗ ಕವಿ 'ಅಲ್ಲಿ' ಎಂಬ ಮಾತನ್ನು ಬಳಸಿದ್ದಾರೆ. 'ಅಲ್ಲಿ' ಪರಲೋಕವನ್ನು ಬಹುಪಾಲು ಸ್ವರ್ಗವನ್ನು ಸಂಕೇತಿಸುವಂಥಾದ್ದು. ಕವಿ ಜನ್ಮಾಂತರ ಕ್ರಿಯೆ ಮತ್ತು ಕಲ್ಪನೆಗಳ ಬಗ್ಗೆ ನಂಬಿಕೆಯುಳ್ಳವರೆಂಬುದನ್ನು ಅರಿತುಕೊಳ್ಳಬಹುದು. ಆದ್ದರಿಂದ ಅಲ್ಲಿನ ಕಾಲಾವಧಿ ಮುಗಿದನಂತರ ಬರಲು ತಡವರಿಸುತ್ತಿರುವ ಜೀವಗಳ ಮಾನಸಿಕ ಇಕ್ಕಟ್ಟನ್ನು ಉಸಿರುಕಟ್ಟಿಹುದೇನು?ಎಂಬ ಮಾತು ಹೇಳುತ್ತದೆ. ಉಸಿರುಕಟ್ಟಿದಾಗಾಗುವ ಭಯಂಕರವಾದ ಹೇಳಿಕೊಳ್ಳಲಾರದ ಯಾತನೆಯನ್ನು ಅನುಭವವನ್ನು ನೆನಪಿಗೆ ತಂದು, ಸ್ವರ್ಗದಲ್ಲಿ ಅಥವಾ ಪರಲೋಕದಲ್ಲಿ ಜನಸಂಖ್ಯೆ ಮಿತಿ ಮೀರಿದೆಯೆಂಬುದನ್ನು ತಿಳಿಹೇಳಿ , ವಿಡಂಬಿಸುತ್ತದೆ. ಕವಿ ಜೀವಗಳನ್ನು ಕುರಿತು ಹೀಗೆ ಸಂಬೋಧಿಸುತ್ತಾರೆ:

ಗುಂಗುರು ಕ್ರಿಮಿಕೀಟ ಕುಲವ ಹೆರುವ ಅತ್ತಿಹಣ್ಣೆ
ನಾಚಿ ಸೋಲುವಂತೆ
ಕೋಟಿ ಕೋಟಿ ಕೋಟಿ ಕೋಟಿ
ನಿಮಿಷ ನಿಮಿಷ ಹುಟ್ಟಿ ಮುಲುಗುಡುವ ಶಿಶುಸಂಖ್ಯೆಯಲ್ಲಿ,
ನಮಗೇ ಇಲ್ಲಿ
ಹೊಟ್ಟೆಗಿಲ್ಲದೆ ವಿವಿಧ ಬಟ್ಟೆಗಳಲ್ಲಿ,
ಕೆರೆ ಕಟ್ಟೆ ಬಾವಿ ಇಲಿ ಪಾಷಾಣ ಫಾಲಿಡಾಲು
ತಿಗಣೆ ಔಷಧಿ ನೇಣುರುಳು ದಾರಿಗಳು ದಿನಾಲು
ನುಗ್ಗುತಿಹೆವೆಲ್ಲಾ ನಿಮ್ಮತ್ತಕಡೆಗೆ!?

ಜನಸಂಖ್ಯೆಯ ಹೆಚ್ಚಳದ ಅತ್ಯಂತ ಸಮರ್ಪಕ ವಾಸ್ತವಿಕ ಚಿತ್ರವಿದು. ಇಲ್ಲಿ ಬಳಸಿರುವ ಒಂದೊಂದು ಪದ ವೃಥಾ ವ್ಯಯವಾಗದೆ ಪಡೆದುಕೊಳ್ಳುವ ಸಾರ್ಥಕತೆ ಅಸೂಯೆ ಹುಟ್ಟಿಸುವಂಥದು. ಇಲ್ಲಿ ಬಳಸಿರುವ ಒಂದೇ ಒಂದು ಉಪಮೆಯೂ ಅತ್ಯಂತ ಔಚಿತ್ಯಪೂರ್ಣವಾಗಿದ್ದು, ಮೂಲ ವಸ್ತುವಿಗೆ ಕೇವಲ ಹೋಲಿಕೆಯಾಗಿ ಮಾತ್ರ ಉಳಿಯದೆ ವಸ್ತುವನ್ನು ಮತ್ತಷ್ಟು ಸಾಂದ್ರಗೊಳಿಸುವಲ್ಲಿ ಸಮರ್ಥವಾಗಿದೆ. ಗುಂಗುರು ಕ್ರಿಮಿ ಕೀಟ ಕುಲವ ಹೆರುವ ಅತ್ತಿಹ ಣ್ಣು ನಾಚಿ ಸೋಲುವಂತೆ ಜನಸಂಖ್ಯೆ ಹೆಚ್ಚಿದೆ. 'ಗುಂಗುರು' ಎಂಬ ಪದ ಸುರುಳಿ ಸುರುಳಿಯಾಗಿ, ಒಂದಕ್ಕೊಂದು ಬೆಸೆದುಕೊಂಡಿರುವ ಕೂದಲನ್ನು ನೆನಪಿಗೆ ತಂದು ಭೂಮಿಯ ಜನಸಂಖ್ಯೆಯ ಒತ್ತಡವನ್ನು

ಸಮೀಕರಿಸುತ್ತದೆ. ಕ್ರಿಮಿ ಕೀಟ ಕುಲ ಆ ಕೂದಲಿನಂತೆ ಒಂದೊಕ್ಕೊಂದು ಬೆಸೆದುಕೊಂಡು ಬೆಸೆದುಕೊಂಡು ಒದ್ದಾಡುವ ಜೀವಂತ ಕಂಕಾಲ ಪಂಕ್ತಿಗಳ ಗುಂಪನ್ನು ಚಿತ್ರಿಸುತ್ತದೆ. 'ಅತ್ತಿಹಣ್ಣು' ತನ್ನ ಉಪಮೆಯ ಕೆಲಸವನ್ನು ನಿರ್ವಹಿಸಿ ಭೂಮಿಯ ಗುಂಡಾಕಾರವನ್ನು ನೆನಪಿಗೆ ತಂದು ಕವನದ ನಡಿಗೆಯನ್ನು ಮುಂದುವರಿಸುತ್ತದೆ. ಈ ಭೂಮಿಯು ಕೂಡ ಮನುಷ್ಯ ಕ್ರಿಮಿಗಳನ್ನು ಹೆರುವ ಯಂತ್ರವಾಗಿ ಮಾತ್ರ ನಿಂತು ನರಳುತ್ತಿದೆ. 'ಕ್ರಿಮಿ ಕೀಟ' ಎಂಬಲ್ಲಿರುವ ವ್ಯಂಗ್ಯಮಯವಾದ ವಿಷಾದತೆ ಪರಿಣಾಮ ತರುತ್ತದೆ. ಮುಂದೆ ಬರುವ 'ಕೋಟಿ ಕೋಟಿ ಕೋಟಿ ಕೋಟಿ ನಿಮಿಷ ನಿಮಿಷ' ಎಂಬ ಮಾತುಗಳು ಜನಸಂಖ್ಯೆ ಮತ್ತು ಕಾಲದ ವೇಗದ ಕಲ್ಪನೆಯನ್ನು ತಂದು ಕೊಡುವಲ್ಲಿ ಮತ್ತು ಆ ಕಲ್ಪನೆಯ ಚಿತ್ರ ಅರ್ಥವತ್ತಾಗಿ ಓದುಗನ ಮನದಲ್ಲಿ ದಟ್ಟೈಸುವಂತೆ ಮಾಡುವಲ್ಲಿ ಸಾರ್ಥಕಗೊಂಡಿವೆ. ಹೀಗೆ ಮುಲುಗುಡುವಿಕೆ ಹುಟ್ಟಿ ಕ್ರಿಮಿ ಕೀಟಗಳನ್ನು ನೆನಪಿಗೆ ತರುತ್ತದೆ. ಮೊದಲು ಬಳಸಿದ ಅತ್ತಿಹಣ್ಣಿನ ಕ್ರಿಮಿ ಕೀಟಗಳಿಗೂ ಭೂಮಿಯ ಜನರಿಗೂ ಈ 'ಮುಲುಗುಡು' ಪದ ಪರಸ್ಪರ ಹೊಂದಿಕೊಂಡು ಪರಿಣಾಮಕಾರಿಯಾದ ಅರ್ಥ ಕಲ್ಪಿಸಿಕೊಳ್ಳುತ್ತದೆ. ಈ ಘಟ್ಟದಲ್ಲಿ ಜನಸಂಖ್ಯೆಯ ಹೆಚ್ಚಳ ಹೆಚ್ಚು ಅಸಹ್ಯಕರವೆನಿಸಿ ಓದುಗನ ಮೇಲೆ ವಿಲಕ್ಷಣ ಪ್ರಭಾವ ಬೀರುತ್ತದೆ. ಹೀಗೆ ನಿಮಿಷ ನಿಮಿಷಗಳಲ್ಲಿ ಕೋಟಿ ಕೋಟಿ ಜನಿಸಲಿರುವ ಶಿಶುಸಂಖ್ಯೆಗೆ ಹೊಟ್ಟೆಗಿಲ್ಲ. ಈ ಹೊಟ್ಟೆಗಿಲ್ಲದಿರುವಿಕೆಯನ್ನು ಕವಿ ನಮಗೇ, ಎಂದು ಪ್ಲುತ ಬಳಸಿ ಒತ್ತು ಕೊಡುತ್ತಾರೆ. ನಮಗೇ ಎಂಬಲ್ಲಿನ ತೀವ್ರತೆ ಹಸಿವೆಯ ತೀವ್ರತೆಯನ್ನು ಹೇಳುತ್ತದೆ. ಜನತೆ ಹೊಟ್ಟೆಗಿಲ್ಲದೆ ವಿವಿಧ ಬಟ್ಟೆಗಳಲ್ಲಿ ಈಗ ಜೀವಗಳಿರುವ ಪರಲೋಕಕ್ಕೆ ಬರುತ್ತಿದ್ದಾರೆ. ವಿವಿಧ ಬಟ್ಟೆಗಳಲ್ಲಿ ಎಂದಾಕ್ಷಣ, ಅವು ಯಾವ್ಯಾವು ಎಂಬ ಕುತೂಹಲ ಕೆರಳುತ್ತದೆ. ಕವಿ ತಣ್ಣಗೆ ಹೇಳುತ್ತಾರೆ. ಕೆರೆ ಕಟ್ಟೆ ಬಾವಿ ಇಲಿ ಪಾಷಾಣ ಘಲಿಡಾಲು ತಿಗಣೆ ಔಷಧಿ ನೇಣುರುಳು, ಇವು ದಾರಿಗಳು ಮೇಲಿನ ಸಾವಿನ ಮಾರ್ಗಗಳು ಸಾವಿನ ಸಹಜವಾದ ಅಂಶಗಳೆಲ್ಲ, ಆತ್ಮಹತ್ಯೆಯ ದಾರಿಗಳು. ಬದುಕನ್ನು ಬಾಳಲಾರದೆ, ಇಲ್ಲಿಯೇ ನರಕಯಾತನೆಯನ್ನು ಅನುಭವಿಸಲಾರದೇ ಅನಿವಾರ್ಯವಾಗಿ ಆತ್ಮಹತ್ಯೆಯ ಮಾರ್ಗವನ್ನು ಅವಲಂಬಿಸುತ್ತಿರುವ ಜಾಗತಿಕ ವಾಸ್ತವ ಸತ್ಯವನ್ನು ಕವನ ಇಲ್ಲಿ ಹಿಡಿದಿಡುತ್ತದೆ. ಇಂಥಹ ದಾರಿಗಳಿಂದ ನುಗ್ಗುತಿಹವಲ್ಲಾ ನಿಮ್ಮತ್ತ ಕಡೆಗೇ, ಎಂದು ಕವಿ ಉದ್ಗಾರ ವೆತ್ತುತ್ತಾರೆ. ಈ ಉದ್ಗಾರದ ಹಿಂದಿರುವ ನೋವು ಹಿಂದಿನ ಚರಣದಲ್ಲಿ ವ್ಯಕ್ತವಾಗುವುದನ್ನು ನೋಡಿದ್ದೇವೆ. 'ಯಾಕಿಂತು....ನುಗ್ಗುತಿರುವಿರಿ?' ಎಂದು ಜೀವಗಳನ್ನು ಪ್ರಶ್ನಿಸಿದ್ದ ಕವಿ ಇಲ್ಲಿ 'ನಾವೇ ನಿಮ್ಮತ್ತ ನುಗ್ಗುತಿಹೆವು' ಎಂದು ಹೇಳುವಲ್ಲಿ ಇಲ್ಲಿಯ ಜನರ ಬದುಕಲಾರದ ನತದೃಷ್ಟತನವನ್ನು ತಿಳಿಸುತ್ತಾರೆ. ಇಲ್ಲಿ ಬರುವ 'ನಿಮ್ಮತ್ತ ಕಡೆಗೇ?' ಎಂಬ ಮಾತು ಜನತೆ ಇಲ್ಲಿಯ ಬದುಕಿನ ರಂಪದಿಂದ ಬೇಸತ್ತು ಹೋಗಿರುವುದನ್ನು ತಿಳಿಸುತ್ತವೆ.

ಇಲ್ಲಿಯವರೆಗೆ ಒಂದು ತೆರದಲ್ಲಿ ಮೂಡಿಬಂದ ಕವನ ಮುಂದೆ ಪಡೆದುಕೊಳ್ಳುವ ತಿರುವು ಕವನಕ್ಕೆ ಪುಷ್ಟಿ ನೀಡುತ್ತದೆ. ಕ್ಯೂ ನಿಂತು ನುಗ್ಗಿ ಬರುತ್ತಿರುವ ಜನಸಂಖ್ಯೆಯ ಮೇಲೆ ಮಾನವ ಹಾಕುತ್ತಿರುವ ಹಿಡಿತವನ್ನು ಕವನ ಹೇಳುತ್ತದೆ. ಆದರೆ ಈ ಮಾನವ ಹಿಡಿತಗಳನ್ನು ಮೀರಿ ನುಗ್ಗುತ್ತಿರುವ ಜೀವಿಗಳ ಮೇಲೆ ಕವಿಗೆ ಅಪಾರ ಅನುಕಂಪ, ಸಹಾನುಭೂತಿಗಳಲ್ಲಿ ನೋವು

ಬೆರೆತಿರುವುದರಿಂದ ಕವನ ಏಕಕಾಲದಲ್ಲಿ ಸಕಾಲಿಕ ರಚನೆಯೂ ಆಗಿ, ಜೀವಂತಿಕೆಯನ್ನು ಕಳೆದುಕೊಳ್ಳುತ್ತಿರುವ ಮಾನವ ಬದುಕಿನ ದುರಂತತೆಯನ್ನೂ ಹೇಳಿ ತನ್ನ ಮಜಲುಗಳನ್ನು ವಿಸ್ತರಿಸಿಕೊಳ್ಳುತ್ತದೆ.

ನೀವಿತ್ತ ಬರದಂತೆ ತಡೆಗಟ್ಟಲೆಂದು
ನೀವು ಐತರುವ ಕಂಡಿಗಳನ್ನೆಲ್ಲ ಅಡಕಲೆಂದು
ರಾಸಾಯನಿಕ ರಬ್ಬರುಂಗುರ ಕಾಂಡಮಿತ್ಯಾದಿ
ಕೃತಕ ನಾನಾ ಉಪಾಯ ಸಾಧನಗಳಿಂದೆ
ಸಂನ್ಯಾಸ ಬ್ರಹ್ಮಚರ್ಯೆ ಮೋಕ್ಷಾದಿ
ಆದರ್ಶದಾಕರ್ಷಣೆಯ ಬೋಧನೆಗಳಿಂದೆ
ಮಾನವರು ಕಟ್ಟುತಿಹ ಕಟ್ಟೆಗಳನೆಲ್ಲ
ಬಿರಿದೊಡೆದು ಕೊಚ್ಚಿ, ಹೊನಲುಕ್ಕಿ
ನುಗ್ಗುತಿಹರೆಲ್ಲಾ ಇತ್ತಕಡೆಗೇ ? !

ಜನನ ನಿಯಂತ್ರಣಕ್ಕಾಗಿ ಮಾನವ ಬಳಸುತ್ತಿರುವ ಬಗೆ ಬಗೆ ಮಾರ್ಗಗಳನ್ನು ಕವಿ ಇಲ್ಲಿ ಹೇಳುತ್ತಾರೆ. ಇಲ್ಲಿ ಬಳಕೆಯಾಗಿರುವ 'ಕಂಡಿ ಅಡಕ' ಪದಗಳು ತುಂಬಾ ಗಟ್ಟಿಯಾಗಿವೆ. ಹೇಳುವ ವಸ್ತುವಿನ ಮೇಲೆ ವಿಶೇಷ ಒತ್ತು ಕೊಡುತ್ತವೆ. ಜೀವಗಳು ಬರುವ ಕಂಡಿಗಳನ್ನು ಅಡಕುವಿಕೆಗೆ ವಿಶಿಷ್ಟ ಅರ್ಥವಿದೆ. ಕಂಡಿಗೆ ರಂಧ್ರವೆಂಬ ಪರ್ಯಾಯ ಪದವಿದ್ದರೂ ಕನ್ನಡ ಗ್ರಾಮೀಣ ಪದದಲ್ಲಿರುವ ಧ್ವನಿ ಗಮ್ಯತೆ ಸಂಸ್ಕೃತ ಪದಕ್ಕಿಲ್ಲ. ಅಡಕು ಎಂದರೆ ಮುಚ್ಚು ಒಂದರಮೇಲೊಂದನ್ನು ಪೇರಿಸು, ಮಿತಿಹಾಕು, ಹಿಡಿತದಲ್ಲಿಟ್ಟುಕೊ - ಎಂದೆಲ್ಲ ಅರ್ಥಗಳಿರುವುದರಿಂದ ಪ್ರತಿ ಅರ್ಥವೂ ಸಂಯೋಗ ಗೊಂಡು ಹೊಂದಿಕೊಳ್ಳುವ ರೀತಿ ಅರ್ಥ ಪೂರ್ಣ. ಜನಸಂಖ್ಯೆಯನ್ನು ತಡೆಯ ಬೇಕಾಗಿದೆ, ಹಿಡಿತದಲ್ಲಿಡಬೇಕಾಗಿದೆ, ಅದಕ್ಕೊಂದು ಮಿತಿ ಹಾಕಬೇಕಾಗಿದೆ - ಈ ವಿವಿಧ ಅರ್ಥಗಳನ್ನೂ ಮೇಲಿನೆರಡು ಪದಗಳು ಬಿಟ್ಟುಕೊಡುತ್ತವೆ.

ಜನಸಂಖ್ಯೆಯ ಹೆಚ್ಚಳದಿಂದ ಮಾನವ ಪ್ರಕೃತಿಯಿಂದ ದೂರಸರಿದು ಕೃತ್ರಿಮತೆಯ ಮೊರೆ ಹೋಗಬೇಕಾಗಿದೆ. ಮಾನವನ ಬುದ್ಧಿಮತ್ತೆಯಿಂದ ಕೃತಕ ಸಾಧನಗಳು ಸೃಷ್ಟಿಗೊಂಡಿವೆ. ಇಲ್ಲಿ ಕವಿಗೆ ನಾಗರೀಕತೆಯಬಗ್ಗೆ, ಅದರ ಪ್ರಗತಿಯ ಬಗ್ಗೆ ಪ್ರೀತಿಯಿದೆ. ಜನಸಂಖ್ಯೆಯನ್ನು ತಡೆಯುವುದು ಇಂದಿನ ಆದ್ಯ ಕರ್ತವ್ಯವಾಗಿದೆ. 'ರಾಸಾಯನಿಕ ರಬ್ಬರುಂಗುರ ಕಾಂಡಮಿತ್ಯಾದಿ ಎಂದು ಹೇಳುವಾಗ ಕವಿ ಸಮಕಾಲೀನ ವೈಜ್ಞಾನಿಕತೆಯನ್ನು ಮರೆತಿಲ್ಲ. ಕವಿ ಅದರ ಮಹತ್ವತೆಯನ್ನು ಎತ್ತಿಹಿಡಿಯುತ್ತಾರೆ. ಜೊತೆಗೆ, ಭಾರತೀಯ ಸಂನ್ಯಾಸ, ಬ್ರಹ್ಮಚರ್ಯೆ, ಮೋಕ್ಷಾದಿ ಆದರ್ಶದಾಕರ್ಷಣೆಯ ಬೋಧನೆ ಗಳನ್ನೂ ಮರೆತಿಲ್ಲ. ಆದರೆ ವಿಜ್ಞಾನ ಭಾರತೀಯ ಈ ತತ್ವಗಳೆರಡನ್ನೂ ಹೇಳುವಾಗ ಕವಿಯಲ್ಲಿ ಒಂದೇ ಬಗೆಯ ಧೋರಣೆಯಿಲ್ಲ. ಕವಿ ಬಳಸುವ ಆಕರ್ಷಣೆ ಎಂಬ ಮಾತಲ್ಲಿ ಸನ್ಯಾಸ, ಬ್ರಹ್ಮಚರ್ಯೆ ಮೋಕ್ಷಾ ಇತ್ಯಾದಿಗಳು ಕೇವಲ ಆಕರ್ಷಣೆಗಳಾಗಿ ನಿಲ್ಲುತ್ತವೆ. ಅನುಕರುಣೆಗೆ

ಯೋಗ್ಯವಲ್ಲ, ಎಂಬ ತಿಳಿಹಾಸ್ಯದ ವಿಡಂಬನೆಯೂ ಇರುವಂತೆ ತೋರುತ್ತದೆ. ಜೊತೆಗೆ ಆದರ್ಶ. ಆದರ್ಶದಾಕರ್ಷಣೆ ಅಷ್ಟು ವಾಸ್ತವವಲ್ಲ ಎಂಬುದನ್ನು ತಿಳಿಸುವುದರ ಜೊತೆಗೆ ಕವಿಗಿರುವ ಪರಂಪರಾಗತ ತತ್ವಗಳ ಬಗೆಗಿನ ನಿಲುವು ಏನೆಂಬುದರ ಅರಿವಾಗುತ್ತದೆ.

ಇಂದು ಅನೇಕ ಕಟ್ಟುಗಳನ್ನು ಮಾನವರು ಕಟ್ಟುತ್ತಿದ್ದಾರೆ. ಕವಿ ಅದನ್ನು 'ಕಟ್ಟೆ' ಎಂಬ ಮಾತಿನಲ್ಲಿ ಅಭಿವ್ಯಕ್ತಿಸುತ್ತಾರೆ. 'ಕಟ್ಟೆ' ಎಂಬ ಮಾತಿಗಿರುವ ಗ್ರಾಮೀಣ ಅರ್ಥ ಅಷ್ಟು ಬಿಗಿಯಲ್ಲದ ಅಡ್ಡಕಟ್ಟು, ಚಿಕ್ಕದು. ಇದಕ್ಕಿಂತ ನುಗ್ಗಿ ಬರುತ್ತಿರುವ ಜೀವಗಳ ಪ್ರವಾಹವೇ ಭಯಾನಕ ಶಕ್ತಿ ಹೊಂದಿದೆ. ಈ ಪ್ರವಾಹದ ಮುಂದೆ ಮಾನವನ ಕಟ್ಟುಗಳೆಲ್ಲಿ ನಿಲ್ಲುತ್ತವೆ? 'ಬಿರಿದೊಡೆದು ಕೊಚ್ಚಿ ಹೊನಲುಕ್ಕಿ' ಎಂಬ ಮಾತು ತಂದುಕೊಡುವ ಉಕ್ಕಿದ ಪ್ರವಾಹ ಮಾನವ ನಿರ್ಮಿತ ಕೃತಕ ಕಟ್ಟೆಗಳನ್ನು ಕೊಚ್ಚಿಹಾಕುವ ಚಿತ್ರ ರೂಪಕಾತ್ಮವಾಗಿ ನಿಲ್ಲುತ್ತದೆ. ಪ್ರಕೃತಿ ಶಕ್ತಿಎದುರು ಮಾನವ ಶಕ್ತಿಯು ಕುಬ್ಜವಾಗುತ್ತದೆಯೆಂದು ಕವಿ ತಿಳಿಸುತ್ತಾರೆ. ಇಲ್ಲಿ ಕವಿಗೆ ಪುರುಷ ಶಕ್ತಿಯ ಬಗ್ಗೆ ಅನುಮಾನವಿಲ್ಲ, ಗೌರವವಿದೆ. ಆದರೆ ಅನಿವಾರ್ಯವಾಗುತ್ತಿರುವ ಪ್ರಕೃತಿ ಶಕ್ತಿಯನ್ನು ತಡೆಯುವ ಶಕ್ತಿ ಮಾನವನಿಗಿಲ್ಲ. ಜೀವಗಳು ಎಲ್ಲಾ ಕಟ್ಟುಗಳನ್ನು ಕಿತ್ತುಕೊಂಡು 'ಇತ್ತ ಕಡೆಗೇ?!' ನುಗ್ಗುವುದು ಕವಿಗೆ ಆಶ್ಚರ್ಯವೂ ಆಗಿ ಪ್ರಶ್ನಾತ್ಮಕವೂ ಆಗಿ ನಿಲ್ಲುತ್ತದೆ . ಇಲ್ಲಿಯೂ ಸಹ "ಕಡೆಗೇ?!" ಎಂಬಲ್ಲಿ ಕವಿ ಬಳಸುವ ಪ್ಲುತ ಇತ್ತ ಕಡೆಯಲ್ಲಿರುವ ನೋವನ್ನು ಹೇಳುವಲ್ಲಿ ಸಾರ್ಥಕವಾಗಿದೆ.

ಕವಿ ಹೃದಯದ ಅನುಕಂಪ , ನೋವುಗಳು ದಟ್ಟವಾದ ವಾಸ್ತವಿಕ ಅರಿವಿನಿಂದ ಬಂದಂಥಹವು . ಕವಿ ಬಳಸುವ ಮಾತುಗಳಲ್ಲಿ ಎಲ್ಲಿಯೂ ಕೃತ್ರಿಮತೆ ಇಣುಕುವುದಿಲ್ಲ. ವಸ್ತುವಿನೊಡನೆ ಕವಿ ತಾಳಿದ ತನ್ಮಯತೆ , ಅನುಭವಿಸಿದ ಪರಿ ಎಲ್ಲವೂ ಮಿಳಿತವಾಗಿ ಕವನವನ್ನು ಹೆಚ್ಚು ಗಟ್ಟಿಯಾಗಿಸುತ್ತವೆ. ಕವನ ನೋವಿನ ಅನುಭವ ತಂದುಕೊಡುತ್ತದೆ.

ಅಯ್ಯಯ್ಯೋ
ಏನು ಬಂದಿದೆ ನಿಮಗೆ ಅಲ್ಲಿಆತಂಕ?
ಕಾದಿರದೆ ನಿಮಗಿಲ್ಲಿ ಘೋರತರ ನರಕ?

'ಅಯ್ಯಯ್ಯೋ' ಎಂಬ ಮಾತಿನಲ್ಲಿರುವ ತೀವ್ರ ಅನುಕಂಪ ಹೃದಯದಿಂದ ನೇರ ಬಂದದ್ದು. ಈ ಆರ್ತನಾದ ಬರುವ ಜೀವಗಳ ಮುಂದಿನ ಕಂಕಾಲ ಸ್ಥಿತಿಯನ್ನು ನೆನೆಸಿಕೊಂಡು ಕಲ್ಪಿಸಿಕೊಂಡು ಕವಿ ಹೊರಡಿಸಿದ್ದು. ಈ ಆರ್ತನಾದದಲ್ಲಿ ಹೆದರಿಕೆಯೂ ಇದೆ, ಭಯವೂ ಇದೆ. ಈ ಭಾವನೆಗಳೆಲ್ಲದರ ಸಂಕೀರ್ಣ ಸ್ಥಿತಿಯೆ ಕವಿಗೆ ಜೀವಗಳ ಬಗ್ಗೆ ಕಾಳಜಿ ವಹಿಸುವಂತೆ ಮಾಡಿದೆ. ಆದ್ದರಿಂದಲೇ ಕವಿ ಪ್ರಶ್ನಿಸುತ್ತಾರೆ: ಏನು ಬಂದಿಧೆ ನಿಮಗೆ ಅಲ್ಲಿ ಆತಂಕ?" ಜೊತೆಗೆ ಕವಿಯ ಮನೋಸ್ಥಿತಿಯಲ್ಲಿರುವ ಸಹೃದಯನ ಪ್ರಶ್ನೆಯೂ ಸಹ ಅಯ್ಯಯ್ಯೋ ಎಂಬಲ್ಲಿನ ಆರ್ತತೆಯ ಉದ್ವಿಗ್ನತೆ ಈ ಚರಣದಲ್ಲಿ ಮಿದುವಾಗಿದೆ. ಇಲ್ಲಿ ಮಗುವನ್ನು ಸಂತೈಸುವ ತಾಯ್ತನವಿದೆ. ಕವಿ

ತಾಯಿಯಂತೆ , ಮಗುವಿಗೆ ಮುಂದೆ ಕಾಯ್ದಿರುವ ಆಪತ್ತನ್ನು ನೆನೆಸಿಕೊಂಡು ಮಿದುವಾಗಿ ಬುದ್ಧಿ ಹೇಳುತ್ತಿರುವಂತೆ ತೋರುತ್ತದೆ . ಈ ಸಾಲಿನ ಮಿದುತನವೇ ಮುಂದುವರಿದು ಕಾದಿರದೆ ನಿಮಗಿಲ್ಲಿ ಘೋರತರದ ನರಕ ಎಂಬಲ್ಲಿಗೆ ನಿಲ್ಲುತ್ತದೆ. ಈ ಭೂಮಿಯ ಮೇಲಿನ ಬದುಕನ್ನು ಘೋರತರವಾದ ನರಕಕ್ಕೆ ಹೋಲಿಸಿರುವಲ್ಲಿ , ಈ ಬದುಕಿನ ದುರಂತತೆ ಅಡಗಿ ನಿಂತಿದೆ. ಮಾನವರು ಮಾನವೀಯತೆ ಬಿಟ್ಟು ಪಶುಗಳಾಗಿ ನಡೆಸುತ್ತಿರುವ ಪೈಪೋಟಿಯಿಂದ ಈ ಭೂಮಿ ಘೋರತರವಾದ ನರಕವೆನ್ನಿಸದೆ ಮತ್ತೇನು, ಎಂಬುದು ಕವಿಯ ಆಶಯ. ಕೊನೆಗೆ ಕವನ ಈ ಕೆಳಗಿನ ಚರಣಗಳಿಂದ ಮುಕ್ತಾಯ ವಾಗುತ್ತದೆ:

ಯಾಕಿಂತು
ಕ್ಯೂನಿಂತು
ನುಗ್ಗುತಿರುವಿರಿ ಜನ್ಮಧಾರಣೆಗೆ
ಓ ನತದೃಷ್ಟ ಪ್ರೇತಗಳಿರಾ

ಈ ಸಾಲುಗಳು ಉಂಟು ಮಾಡುವ ವಿಶಿಷ್ಟ ತಿರುವು ಕವನಕ್ಕೆ ಅಸಾಧಾರಣೆಯನ್ನು ತಂದುಕೊಡುತ್ತದೆ. ಈ ಮೊದಲು ಕವಿಗೆ ಜೀವಗಳ ಬಗೆಗಿದ್ದ ಕಳಕಳಿ, ಮೆದುತನ ಇಲ್ಲಿ ತಕ್ಷಣ ಮಾಯವಾಗುತ್ತದೆ. ಈ ಮಾಯವಾಗುವಿಕೆ ಆಕಸ್ಮಿಕವಲ್ಲ. ಜನ್ಮಧಾರಣೆಗೆ ನುಗ್ಗುತ್ತಿರುವ ಜೀವಗಳಿಗೆ ಇಲ್ಲಿಯ ಸಮಗ್ರ ದುರಂತವನ್ನು ತಿಳಿಸಿದರೂ ಅವು ಒಂದೇ ಸಮನೇ ನಗ್ಗುತ್ತಿರುವುದು ಕವಿಗೆ ಅತ್ಯಂತ ಹಿಂಸೆಯ ವಿಷಯವಾಗಿದೆ. ಅವುಗಳ ನಗ್ಗುವಿಕೆ ಪ್ರೇತದಂತೆ ಭಾಸವಾಗಿದೆ. ಪ್ರೇತ, ಕಾಡುವಿಕೆಗೆ ಸಂಕೇತ. ಜೀವಗಳು ಮತ್ತೆಮತ್ತೆ ಹುಟ್ಟಿ ಮಾನವ ಬದುಕನ್ನು ಪ್ರೇತದಂತೆ ಅಮರುತ್ತಿವೆ. ಪ್ರೇತ ಮತ್ತೆ ಕಂಕಾಲ ಪಂಕ್ತಿಯನ್ನು ನೆನಪಿಗೆ ತರುತ್ತವೆ. ಮುಂದೆ ಈ ಜೀವಗಳೂ ಕೂಡ ಪ್ರೇತಗಳಾಗುವುದರಲ್ಲಿ ಸಂದೇಹವಿಲ್ಲವೆಂದು ಕವಿ ಅವನ್ನು ಪ್ರೇತಗಳಿರಾ? ಎಂದು ತುಂಬಾ ವಿಡಂಬನಾತ್ಮಕವಾಗಿ ಸಂಬೋಧಿಸಿ ಕವನವನ್ನು ಮುಗಿಸುತ್ತಾರೆ. ಇದರಿಂದ ಕವನಕ್ಕೊಂದು ವಿಶಿಷ್ಟ ಅನುಭವ ಸಾಂದ್ರವಾಗಿ, ಓದುಗ ಅದರಿಂದ ಮೂಡುವ ಅಲೆಗಳಲ್ಲಿ ಚಿಂತನಾಪರನಾಗುವಂತೆ ಮಾಡುತ್ತದೆ. ಕವನ ಮುಗಿದರೂ ಅದು ತಂದುಕೊಡುವ ಭಾವನೆಗಳು ಮನಸ್ಸಿನ ಮೇಲೆ ದಟ್ಟವಾಗಿ ಬೇರೂರಿ ಸಹೃದಯ ತನ್ನ ಮತ್ತು ತನ್ನ ಜನಾಂಗದ ಕರ್ತವ್ಯ ಮತ್ತು ಜವಾಬ್ದಾರಿಗಳ ಬಗ್ಗೆ ಚಿಂತಿಸುವಂತೆ ಮಾಡುತ್ತವೆ . ಹೀಗಾಗಿ ಈ ಕವನ ಉತ್ತಮ ಸಾಮಾಜಿಕ ಅರಿವನ್ನೊಳಗೊಂಡು ಗಾಢ ಅನುಭವದ ಫಲವಾಗಿದೆ. ಅಭಿವ್ಯಕ್ತಿ ಕ್ರಮದಲ್ಲಿರುವ ವಿಶಿಷ್ಟತೆ, ಕವನವು ಓದುಗನ ಮೇಲೆ ಪ್ರಭಾವ ಬೀರಲು ಸಹಾಯಕವಾಗಿದೆ.

* * *

**ಪ್ರೇತ ಕ್ಯೂ** ೩೯ ಸಾಲುಗಳ ಒಂದು ಕವನ. ಒಂದೂವರೆ ಪುಟಗಳಷ್ಟು ಆಕ್ರಮಿಸಿದೆ. ಕವನದ ಪ್ರಾರಂಭದ ೧೩ ಸಾಲು ಮತ್ತು ಕವನದ ಕೊನೆಯ ನಾಲ್ಕು ಸಾಲುಗಳು ಒಂದು ಲಯದಲ್ಲಿವೆ. ಮಿಕ್ಕ ಮಧ್ಯದ ೨೨ ಸಾಲುಗಳು ಲಯದ ದೃಷ್ಟಿಯಿಂದ ಬೇರೆ ನಿಲ್ಲುತ್ತವೆ. ಮೊದಲ ೧೩ ಸಾಲುಗಳಲ್ಲಿರುವ ಶಾಬ್ದಿಕರಚನೆಯ ಜೋಡಣೆ ಕ್ಯೂ ನಿಂತು ನುಗ್ಗುತ್ತಿರುವ ಜೀವಗಳ ಚಿತ್ರ ಮತ್ತು ಅವನ್ನು ಸಂಬೋಧಿಸುತ್ತಿರುವ ಕವಿಯ ಭಾವನೆಗಳನ್ನು ಅಚ್ಚುಕಟ್ಟಾಗಿ ಅಭಿವ್ಯಕ್ತಿಸಿದೆ. ಈ ೧೩ ಸಾಲುಗಳಲ್ಲಿ ಕೊನೆಯ ಐದು ಸಾಲುಗಳು ಸ್ವಲ್ಪ ಸರಳವಾಗಿದ್ದರೂ ಒಟ್ಟು ಶಿಲ್ಪಕ್ಕೆ ಕುಂದು ಬರುವುದಿಲ್ಲ. ಇಲ್ಲಿ ಬರುವ ಸರಳ ನಡೆ ಕವಿಯ ವ್ಯಂಗ್ಯವನ್ನು ಸಹೃದಯನಿಗೆ ಸಂವಹನಿಸುವುದರಲ್ಲಿ ಯಶಸ್ವಿಯಾಗಿ ಕವನದ ಕೇಂದ್ರ ಪ್ರಜ್ಞೆಗೆ ಪೂರಕವಾಗುತ್ತದೆ.

ಮುಂದಿನ ೨೨ ಸಾಲುಗಳಲ್ಲಿ ಒಂದಕ್ಷರವೂ ವ್ಯಯವಲ್ಲ . ಪದಗಳು ಒಂದಕ್ಕೊಂದು ಸಾವಯವ ಸಂಬಂಧ ಪಡೆದುಕೊಂಡು ಹೆಚ್ಚು ಸಾಂದ್ರವಾಗಿದೆ. ಈ ಸಾಂದ್ರತೆ ವಸ್ತುವಿನ ಮೇಲೆ ತೀವ್ರ ನಿಗಾ, ಆಸಕ್ತಿವಹಿಸುವಂತೆ ಮಾಡುತ್ತದೆ . ಈ ೨೨ ಸಾಲುಗಳ ಲಯ ಭಿನ್ನವಾಗಿರುವುದರಿಂದ ಭಾವನೆಗೆ ತಕ್ಕ ಅಭಿವ್ಯಕ್ತಿಯನ್ನು ಕಾಣಬಹುದಾಗಿದೆ. ಚಿಕ್ಕ ಚಿಕ್ಕ ಪದಗಳಿಂದ ಕ್ರಿಯೆ ತೀವ್ರ ವಾಗುವಂತೆ ಸಂಯೋಜಿಸಲಾಗಿದೆ.

ಪದಗಳ ಬಳಕೆಯಲ್ಲೂ ಕುವೆಂಪು ಇಲ್ಲಿ ಹೊಸತನ ತೋರಿದ್ದಾರೆ. ಸಂಸ್ಕೃತ ಪದಗಳನ್ನು ಬಳಸಿಕೊಂಡರೂ ಅವು ಇಲ್ಲಿ ತಳೆದಿರುವ ಅರ್ಥ ವಿಶಿಷ್ಟವಾದುದು. ಕವಿ ಬಳಕೆಯ ಮೇಲೆ ರೂಢಿಪದಗಳ ಅರ್ಥ ವಿಶೇಷವಾಗುತ್ತಾ ನಡೆಯುತ್ತದೆಂಬುದು ಇಲ್ಲಿ ನಮಗೆ ತಿಳಿಯುತ್ತದೆ. ಉದಾ: 'ಕಂಕಾಲ ಪಂಕ್ತಿ' ಎಂಬ ಪದ 'ಕಂಕಾಲ'ದ ಬದಲು ಅಸ್ಥಿಪಂಜರ ಎಂದು ಬಳಸಿದ್ದರೆ ಈಗಿರುವ ತೀವ್ರತೆ ಖಂಡಿತ ಬರುತ್ತಿರಲಿಲ್ಲ. 'ಕಂಕಾಲ' ಎಂಬಲ್ಲಿನ 'ಕ' ಕಾರಗಳು ಕರಾಳತೆಯನ್ನು ನೆನಪಿಗೆ ತಂದು, ಅಸ್ಥಿಪಂಜರಗಳು ಕೇವಲ ಅಸ್ಥಿಪಂಜರಗಳಾಗಿ ನಿಲ್ಲದೆ, ಬದುಕಿನ ಭಯಾನಕತೆಯ ಸಮಗ್ರಸ್ಥಿತಿಯನ್ನು ಹಿಡಿದಿಡುತ್ತವೆ. 'ಕ್ಯೂ', 'ಯಾಕಿಂತು' ಎಂಬುದಕ್ಕೆ ಕೇವಲ ಪ್ರಾಸಮಾತ್ರವಾಗಿ ಬರುವುದಿಲ್ಲ. ಇಂಗ್ಲಿಷ್‌ನ 'ಕ್ಯೂ' ಆಧುನಿಕ ಕಾಲದಲ್ಲಿ ಪಡೆದುಕೊಂಡಿರುವ ನಿರಂತತೆಯ ಸಂಕೇತವನ್ನು ಇಲ್ಲಿನೆನಪಿಗೆ ತಂದು, ಯಾವುದೋ ಮುಗಿಯದ ಸಮಸ್ಯೆಯೊಂದರತ್ತ ಸಹೃದಯನ ಗಮನಸೆಳೆಯುತ್ತದೆ. ಕವನದ ೧೦, ೧೧ನೇ ಸಾಲುಗಳಲ್ಲಿ ಬರುವ 'ಗರ್ಭ', 'ಯೋನಿ' ಎಂಬ ಪದಗಳು ಅಶ್ಲೀಲವೆನ್ನಿಸದೆ, ಕವನದ ವಸ್ತುವಿನೊಡನೆ ಅನಿವಾರ್ಯ ಸಂಬಂಧ ಕಲ್ಪಿಸಿಕೊಂಡು ತಂದುಕೊಡುವ ಚಿತ್ರ ಕ್ಯೂ ನಿಂತು, ತಂಗಿ, ಸಾಗಿಬರುವ ಮಾರ್ಗವನ್ನು ತಿಳಿಸುತ್ತದೆ. ಜೊತೆಗೆ ಕವಿಯು ಅದೇ ಕಾಲದಲ್ಲಿ ಮಾಡುವ ವಿಡಂಬನೆಗೆ ತಕ್ಕ ಪದಗಳಾಗುತ್ತವೆ. ಕುಟುಂಬಯೋಜನೆ ಯಲ್ಲಿ ಬಳಸುವ ಅನೇಕ ಕೃತಕ ತಡೆ ಸಾಧನಗಳನ್ನು ಕುವೆಂಪು ಅದ್ಭುತವಾಗಿ ಕನ್ನಡೀಕರಿಸುತ್ತಾರೆ. 'ರಬ್ಬರುಂಗರ' ಮತ್ತು 'ಕಾಂಡ' ಅದರಲ್ಲೂ 'ರಬ್ಬರುಂಗರ' ಎಂಬ ಪದವಂತೂ ಕನ್ನಡಕ್ಕೆ ವಿಶಿಷ್ಟ ಕೊಡುಗೆ ಎನಿಸುತ್ತದೆ. ಜನಸಂಖ್ಯೆಯ ಹೆಚ್ಚಳವನ್ನು ಹೇಳುವಲ್ಲಿ ಬಳಸುವ 'ಮುಲುಗುಡುವ' ಎಂಬ ಪದದ ಕ್ರಿಯಾತ್ಮಕ ಚಿತ್ರ ಬೆರಗು ತರುವಂಥದು. 'ಮುಲುಗುಡು' ಯಾವುದಾದರೂ ನೋವಿನಿಂದ ಮುಲುಗುಡುವುದು. ಅದು ಅವ್ಯಕ್ತ ವೇದನೆ, ಇದಕ್ಕಿಂತ ಮಿಗಿಲಾದ ಮತ್ತೊಂದರ್ಥ

ವಿದೆ. ಬಚ್ಚಲು ಅಥವಾ ಕೊಳೆಗುಂಡಿಯಲ್ಲಿನ ಸೂಕ್ಷ್ಮ ಹುಳುಗಳ ತಲೆ ಕಾಣಿಸಿಕೊಂಡು ಒಂದರ ಮೇಲೊಂದು ಒದ್ದಾಡುವ ಚಿತ್ರ ಅಸಹ್ಯಕರವಾದುದು. ಅದನ್ನು 'ಮುಲುಗುಡುವಿಕೆ' ಎಂದೇ ಕರೆಯುವುದು. 'ಮುಲುಗುಡು' , 'ದಟ್ಟಣೆ' ಯನ್ನೂ ಹೇಳುವ ಪದ. ಹೀಗೆ ಈ ಪದ ಹೊರಡಿಸುವ ಅರ್ಥತರಂಗಗಳಲ್ಲಿ ಸಹೃದಯ ಬೆರೆತು ಹೋಗುವಂತಾಗುತ್ತದೆ.

ಅದೇ ರೀತಿ 'ಕಂಡಿ', 'ಅಡಕ', ' ದಿನಾಲು ', 'ಯಾಕಿಂತು' ,'ಕಟ್ಟೆ', 'ಕೊಚ್ಚು', ' ನುಗ್ಗು' , ' ಏರಿ', 'ಗುಂಗುರು' - ಎಂಬ ಆಡುನುಡಿಗಳು ಕವನವನ್ನು ಹೆಚ್ಚು ತಾಜವಾಗಿಡುತ್ತವೆ. ಆಡುನುಡಿಗಳ ಬಳಕೆಯಲ್ಲಿ ಹೊಸ ಲಯವನ್ನು ಪಡೆದುಕೊಂಡಿರುವ ಈ ಕವನ 'ಐತರುವ', 'ಕಾಂಡಂ' ಎಂಬ ಎರಡು ಹಳಗನ್ನಡ ರೂಪಗಳನ್ನು ಬಳಸಿಕೊಂಡಿದೆ. ಇದರ ಅವಶ್ಯಕತೆ ಅಷ್ಟಾಗಿ ತೋರುವುದಿಲ್ಲ ವಾದ್ದರಿಂದ, ಇವು ಕವನದಲ್ಲಿ ಹೊರತಾಗಿ ನಿಲ್ಲುತ್ತವೆ. ಇವನ್ನು ಕವನದ ಸಂದರ್ಭದಲ್ಲಿ ವಿಶಿಷ್ಟ ವ್ಯಂಗ್ಯಕ್ಕೊ, ಧ್ವನಿ ತರಂಗಕ್ಕೋ ಬಳಸಿಕೊಂಡಿದ್ದರೆ ಔಚಿತ್ಯವಿರುತ್ತಿತ್ತು.

ಕುವೆಂಪು ಎಂದೂ ಕಾವ್ಯದ ಹೊರತೊಗಲಿಗೆ ಜೋತು ಬಿದ್ದವರಲ್ಲ. ಕಾವ್ಯದ ಅಂತಸ್ಸತ್ತ್ವದ ಕಡೆ ನಿಗ ವಹಿಸುತ್ತಾ ಬಂದವರು. 'ಪ್ರೇತ-ಕ್ಯೂ' ಕವನದಲ್ಲೂ ಅದನ್ನು ಗಮನಿಸಬಹುದು. ಕುವೆಂಪು ಇಲ್ಲಿ ಮುಕ್ತಛಂಧ ಬಳಸಿರುವುದನ್ನು ಕಾಣಬಹುದು. ಯಾವ ಸಾಲಿನಲ್ಲೂ ನಿಯತವಾದ ಗಣ ವಿನ್ಯಾಸವನ್ನು ಗುರುತಿಸಲಾಗುವುದಿಲ್ಲ. ಈ ಅನಿಯತ ಗಣ ವಿನ್ಯಾಸದಲ್ಲೇ ಒಂದು ಬಗೆಯ ಅಪೂರ್ವ ರುದ್ರ ಸಂಗೀತವಿದೆ. ರುದ್ರ ಸಂಗೀತ ಬದುಕಿನ ಜಟಿಲತೆಯ ವಿಷಾದ ರಾಗದಂತೆ ತೋರಿದರೆ ಆಶ್ಚರ್ಯವಿಲ್ಲ. ಅದನ್ನು ಈ ಕೆಳಗೆ ಗುರುತಿಸಬಹುದು:

ಕೋಟಿ ಕೋಟಿ ಕೋಟಿ ಕೋಟಿ
ನಿಮಿಷ ನಿಮಿಷಕ್ಕೆ ಹುಟ್ಟಿ ಮುಲುಗುಡುವ ಶಿಶು ಸಂಖ್ಯೆಯಲ್ಲಿ
ನಮಗೇ ಇಲ್ಲಿ
ಹೊಟ್ಟೆಗಿಲ್ಲದೆ ವಿವಿಧ ಬಟ್ಟೆಗಳಲ್ಲಿ,
.............................................

ಒಂದು ಸಾಲಿನಲ್ಲಿ ಭಾವವೊಂದರ ಅನುಭವ ಕೊಟ್ಟು, ತನ್ನದೇ ಆದ ಲಯ ಸೃಜಿಸಿಕೊಂಡು ಮುಂದಿನ ಸಾಲಿಗೆ ವಸ್ತುವನ್ನು ಹರಿಸುವುದನ್ನೂ ಕಾಣಬಹುದು. 'ಕೋಟಿ ಕೋಟಿ ಕೋಟಿ ಕೋಟಿ' ಎಂಬಲ್ಲಿಗೆ ಲಯ ಮುಂದುವರಿದು'ನಿಮಿಷ ನಿಮಷಕೆ' ನಿಂತು ಸರಿದು ಮಂದವಾಗುತ್ತದೆ. 'ನಮಗೇ ಇಲ್ಲಿ' ಎನ್ನುವಾಗಿನ ದೀರ್ಘತೆಯ ಅನುಭವವನ್ನು ತಂದು ಕೊಡುವ ರೀತಿ ವಿಶಿಷ್ಟವಾಗಿದೆ.

ಕೆರೆ ಕಟ್ಟೆ ಬಾವಿ ಇಲಿಪಾಷಾಣ ಫಾಲಿಡಾಲು
ತಿಗಣೆ ಔಷಧಿ ನೇಣುರುಳು ದಾರಿಗಳಲಿ ದಿನಾಲು
ಏನು ಬಂದಿದೆ ನಿಮಗೆ ಅಲ್ಲಿ ಆತಂಕ?
ಕಾದಿರದೆ ನಿಮಗಿಲ್ಲಿ ಘೋರತರ ನರಕ?

ಮೇಲಿನ ಸಾಲುಗಳಲ್ಲಿ ಅಂತ್ಯ ಪ್ರಾಸವಿದ್ದರೂ ಗಣ ನಿಯತಿಯಿಲ್ಲ. ಮೂರು ನಾಲ್ಕು ಮಾತ್ರೆಗಳ ಲಯಗಳ ಭಾವನೆಗಳ ಏರಿಳಿತವನ್ನು ಸೂಕ್ಷ್ಮವಾಗಿ ಹಿಡಿದಿಡುತ್ತವೆ. ಇಲ್ಲಿಯ ಅಂತ್ಯ ಪ್ರಾಸ ಕೂಡ ಅನಿವಾರ್ಯವೆನಿಸುವಷ್ಟರ ಮಟ್ಟಿಗೆ ಸಹಜವಾಗಿದೆ.

ವಸ್ತು, ಭಾವ, ಬಂಧ; ಭಾಷೆ- ಎಲ್ಲದರ ತರತಮ ಬೆಸುಗೆಯಿಂದಾಗಿ ಕುವೆಂಪು ಅವರ ಅದ್ಭುತ ಸೃಷ್ಟಿಗಳಲ್ಲೊಂದಾಗಿ **ಪ್ರೇತ - ಕ್ಯೂ** ನಿಲ್ಲುತ್ತದೆ.

* * *

# ಮಕ್ಕಳ ಸಾಹಿತ್ಯ - ಕುವೆಂಪು ದೃಷ್ಟಿಯಲ್ಲಿ

ಸಾಮಾಜಿಕ ಶಿಕ್ಷಣದ ಮೂಲ ಉದ್ದೇಶ ಮಕ್ಕಳ ಸಾಹಿತ್ಯ ರಚನೆಯ ಗುರಿಯಾಗಿರಬೇಕು. ಮಕ್ಕಳಿಗೆ ಕೊಡುವ ಶಿಕ್ಷಣ ಅವರ ಮುಂದಿನ ಬದುಕನ್ನು ರೂಪಿಸುತ್ತದೆ. ಸಂಕ್ರಮಣ ಸ್ಥಿತಿಯಲ್ಲಿರುವ ಭಾರತದಂಥ ದೇಶ ಸೃಷ್ಟಿ ಮಾಡುವ ಲೇಖಕ ಅತ್ಯಂತ ಸೂಕ್ಷ್ಮಮತಿಯೂ ವಿಚಾರವಂತನೂ ವೈಜ್ಞಾನಿಕ ದೃಷ್ಟಿಕೋನವುಳ್ಳವನೂ ಆಗಿರಬೇಕಾಗುತ್ತದೆ. ಮಕ್ಕಳ ಮೃದುವಾದ, ಕೋಮಲವಾದ ಮನಸ್ಸಿನ ಮೇಲೆ ಹೇಳುವ ಪ್ರತಿಯೊಂದು ವಿಷಯವೂ ಪದರ ಪದರವಾಗಿ ಶೇಖರವಾಗುತ್ತಾ ನಡೆಯುತ್ತದೆ. ಅದು, ಮುಂದಿನ ಮಗುವಿನ ಬದುಕಿನ ಹಾದಿಯಾಗುತ್ತದೆ.ಮಗುವಾಗಿದ್ದಾಗ ಅಚ್ಚೊತ್ತಿ ನಿಂತ ಸಂಗತಿಗಳು. ಮುಂದೆ ಕಾರ್ಯರೂಪಕ್ಕಿಳಿಯಲು ಹವಣಿಸುತ್ತವೆ.

ಈ ದೃಷ್ಟಿಯಿಂದ ಮಕ್ಕಳ ಸಾಹಿತ್ಯ ಸೃಷ್ಟಿ ಮಾಡುವ ಲೇಖಕ ಜವಾಬ್ದಾರಿ ದೊಡ್ಡದಾಗಿರುತ್ತದೆ. ರಷ್ಯಾದ ಶ್ರೇಷ್ಠ ಸಾಹಿತಿ ಮ್ಯಾಕ್ಸಿಂಗಾರ್ಕಿ ಈ ಬಗ್ಗೆ ಒಂದು ಕಡೆ ಹೀಗೆ ಹೇಳುತ್ತಾನೆ:

" To successfully create fiction and educative literature for children we need the following : First writers of talent capable of writing simply, Interestingly and meaningfully : then, editors of culture, with suffcient Political and literary training and finally, the technical facilities to guarantee the timely Publication and due quality of books for children."

ಮುಂದೆ ಆತನೇ, ಮಕ್ಕಳ ಸಾಹಿತ್ಯಕ್ಕೆ ಏನೇನು ವಸ್ತುವಾಗಬಲ್ಲುದು ಎಂದು ವಿವರವಾದ ಪಟ್ಟಿಯೊಂದನ್ನು ಕೊಡುತ್ತಾನೆ. ಭೂಮಿ, ಗಾಳಿ, ನೀರು, ಗಿಡ, ಪ್ರಾಣಿ, ಈ ಭೂಮಿಯಲ್ಲಿ ಮಾನವನ ಉಗಮ, ಬೆಂಕಿಯ ಅನ್ವೇಷಣೆಯ ಮಹತ್ವ, ತಾಂತ್ರಿಕತೆ, ಮನುಷ್ಯ ಏಕೆ ಕತೆ ಹೇಳುತ್ತಾನೆ-ಬರೆಯುತ್ತಾನೆ, ಧರ್ಮ ಎಂದರೇನು? ಅದರ ಪ್ರಯೋಜನವೇನು ? ಚರಿತ್ರೆ ಎಂದರೇನು? ಅದರ ಪ್ರಯೋಜನವೇನು? ಹೀಗೆ ಅನೇಕ ವಿಷಯಗಳ ಬಗ್ಗೆ ಮಕ್ಕಳ ಸಾಹಿತ್ಯ ಬರೆಯುವಾತ ಚಿಂತಿಸಬೇಕಾಗುತ್ತದೆ. ಚಿಂತಿಸಿ, ತಮ್ಮ ಕೃತಿಗಳಿಗೆ ವಸ್ತುವನ್ನು ಆರಿಸಿಕೊಳ್ಳಬೇಕಾಗುತ್ತದೆ.

ಪ್ರಸ್ತುತ ನನ್ನ ಲೇಖನದ ಉದ್ದೇಶ ಕುವೆಂಪು ಅವರ ಶಿಶು ಸಾಹಿತ್ಯವನ್ನು ವಿಮರ್ಶೆ ಮಾಡುವುದಾಗಲೀ, ಸಮೀಕ್ಷೆ ಮಾಡುವುದಾಗಲೀ ಅಲ್ಲ. ಸ್ವತಃ ವಿಚಾರವಾದಿಯೂ ಶಿಶು ಸಾಹಿತ್ಯ

ರಚನಾಕಾರರೂ ಆದ ಕುವೆಂಪು ಶಿಶು ಸಾಹಿತ್ಯದ ಬಗ್ಗೆ ತಳೆದಿರುವ ನಿಲುವುಗಳೇನು ಎಂಬುದರ ಬಗ್ಗೆ ತಿಳಿಯುವುದಾಗಿದೆ. ಶಿಶು ಸಾಹಿತ್ಯ ಹೇಗಿರಬೇಕು? ಅದರ ಅಗತ್ಯ ವಸ್ತುಗಳೇನು? ಅದರ ಉದ್ದೇಶವೇನು? ಗುರಿಯೇನು? ಎಂಬುದರ ಬಗ್ಗೆ ಕುವೆಂಪು ಅವರ ಅಭಿಪ್ರಾಯ ಮತ್ತು ಧೋರಣೆಗಳನ್ನು ಹುಡುಕುವುದಾಗಿದೆ. ಜೊತೆಗೆ, ಈ ಧೋರಣೆಗಳು ಆಧುನಿಕ ಮಕ್ಕಳ ಜಗತ್ತಿಗೆ ಎಷ್ಟರ ಮಟ್ಟಿಗೆ ಸಹಜ ಅಥವಾ ಅಗತ್ಯ ಎಂಬುದನ್ನು ನೋಡವುದಾಗಿದೆ.

ಕುವೆಂಪು ಕನ್ನಡದ ಶ್ರೇಷ್ಠ ಕಾದಂಬರಿಕಾರ, ಕವಿ; ಮೇಲಾಗಿ ವಿಚಾರವಾದಿ. ಇವರು ಮಕ್ಕಳ ಸಾಹಿತ್ಯವನ್ನೂ ರಚಿಸಿದ್ದಾರೆ. ಅಮಲನ ಕಥೆ, ಹಾಳೂರು, ಬೊಮ್ಮನಹಳ್ಳಿಯ ಕಿಂದರಿ ಜೋಗಿ-ಎಂಬ ಕಥನ ಕವನಗಳು; ನನ್ನ ಮನೆ, ಮೇಘಪುರ, ಮರಿವಿಜ್ಞಾನಿ-ಎಂಬ ಕವನ ಸಂಕಲನಗಳು; ಮೋಡಣ್ಣನ ತಮ್ಮ , ನನ್ನ ಗೋಪಾಲ -ಎಂಬೆರಡು ನಾಟಕಗಳು. ನರಿಗಳಿಗೇಕೆ ಕೋಡಿಲ್ಲ? ಎಂಬ ಕಥೆ-ಇಷ್ಟು ಕುವೆಂಪು ಅವರಿಂದ ರಚಿತವಾಗಿರುವ ಶಿಶು ಸಾಹಿತ್ಯ. "ಇವರ ಶಿಶು ಸಾಹಿತ್ಯ ಮಕ್ಕಳ ಮನೋವಿಕಾಸಕ್ಕೆ ಪುಷ್ಕಳವಾದ ಆಹಾರ. ಇದರಲ್ಲಿ ಮನರಂಜನೆಯಿದೆ. ಮನಸೆಳೆವ ರಮ್ಯ ಅಭಿವ್ಯಕ್ತಿಯಿದೆ ಹಾಗೂ ಉನ್ನತ ದರ್ಶನವಿದೆ" ಎಂದು ರಾಗೌ ಅಭಿಪ್ರಾಯ ಪಡುತ್ತಾರೆ.

ಮೂಲಭೂತ ಅಂಶವೊಂದನ್ನು ಕುವೆಂಪು ಅವರಲ್ಲಿ ಗುರುತಿಸಬಹುದು. ಅದು ಕುವೆಂಪು ವೈಚಾರಿಕ ಲೇಖನಗಳಲ್ಲೇ ಆಗಲಿ, ಕವನಗಳಲ್ಲೇ ಆಗಲಿ ವಸ್ತುವನ್ನು ಒತ್ತಿ ಹೇಳುವ ಉದ್ದೇಶದಿಂದ ಅದನ್ನು ಹೆಚ್ಚು ಶೈಕ್ಷಣಿಕಗೊಳಿಸಿರುವುದು. ಹೀಗಾಗಿ ಅವರ ಬಹು ಪಾಲು ಕವನಗಳು ಹೇಳುವ ತುರ್ತಿನಿಂದಾಗಿ ತಮ್ಮ ಕಾವ್ಯಶಕ್ತಿಯ ಕಾವನ್ನು ಕಳೆದುಕೊಳ್ಳುವುದೂ ಉಂಟು. ಹೇಳಿದ್ದು ಪ್ರಥಮತಃ ಅರ್ಥವಾಗಬೇಕೆಂದು ಅವರ ಉದ್ದೇಶ.

ಇದರ ಜೊತೆಗೆ ಗಮನಿಸಬೇಕಾದ ಮತ್ತೊಂದು ಅಂಶ: ಅವರು ಉದ್ದೇಶಿಸಿ ಹೇಳುವುದು ಬಹುಪಾಲು ಯುವಜನಾಂಗಕ್ಕೆ . ಹಳೆಯ ತಲೆಮಾರಿನ ಮಹತ್ವಪೂರ್ಣ ಮೌಲ್ಯಗಳನ್ನು ಒಪ್ಪಿ ಕೊಂಡು, ಅದನ್ನು ಗೌರವದಿಂದ ಪಕ್ಕಕ್ಕೆ ಸರಿಸಿ ಹೊಸ ಜನಾಂಗ ವಿಚಾರಪರರಾಗಬೇಕೆಂದು ಹೇಳುವಲ್ಲಿ ಕುವೆಂಪು ಅವರಿಗೆ ಕಳಕಳಿಯಿದೆ. ಈ ಮೇಲಿನ ಅಂಶಗಳು ಕುವೆಂಪು ಅವರ ಭವಿಷ್ಯತ್ತಿನ ಜನಾಂಗದ ಕಲ್ಪನೆಯನ್ನು ತಿಳಿಸುತ್ತವೆ. ಯಾವುದೇ ಸಮಾಜ, ದೇಶ, ಸುಧಾರಣೆಯಾಗುವುದು, ಪ್ರಗತಿ ಹೊಂದುವುದು, ತನ್ನ ಹಳೆಯ ನಂಬಿಕೆ, ರೀತಿ ನೀತಿಗಳಿಂದಲ್ಲ; ತನ್ನ ಹೊಸ ಜನಾಂಗ ಜಾರಿಗೆ ತರುವ ಆಧುನಿಕ ಜೀವನ ಮೌಲ್ಯಗಳಿಂದ. ಕುವೆಂಪು ಅವರು ಈ ಆಧುನಿಕ ಜೀವನ ಮೌಲ್ಯದ ಬಗ್ಗೆ ತಮ್ಮ ಕೃತಿಗಳಲ್ಲಿ ಒತ್ತುಕೊಡುತ್ತಾ ಸಾಗುತ್ತಾರೆ.

'ಮನಸ್ಸು' ಎಂದ್ಹು ಕರೆಯಿಸಿಕೊಳ್ಳುವ 'ಮೆದುಳಿನ ವ್ಯಾಪಾರ' ವೊಂದು ಹುಟ್ಟದಿರುವವರೆಗೆ ಮಗು, ತಂದೆ-ತಾಯಿ, ಗುರು -ಹಿರಿಯರು ಹೇಳಿದ್ದನ್ನು ನಂಬಬೇಕು, ಕೇಳಬೇಕು, ಎಂದು ಕುವೆಂಪು ವಾದಿಸುತ್ತಾರೆ. ಇದರಿಂದ ಮಗುವಿನ ಕ್ಷೇಮ ಪರಿಪಾಲನೆಯಾಗುತ್ತದೆಯೆಂಬುದು ಇವರ ನಂಬಿಕೆ.

ಈ ಮಾತಿನಲ್ಲಿ ಸತ್ಯವಿದೆ. ಆಲೋಚನೆಯೇ ಬೆಳೆಯದ, ಸುಪ್ತವಾಗಿರುವ ಮಗುವಿನ ಒಳಗಿನ 'ಕರಣ' ಜಾಗೃತವಾಗದ ಹಂತದಲ್ಲಿ ಮಗುವಿಗೆ ಯಾರಾದರೊಬ್ಬರ ನೆರವು ಬೇಕಾಗುತ್ತದೆ. ಆದರೆ ಇಲ್ಲಿ ಕುವೆಂಪು ಅವರ ದೃಷ್ಟಿಕೋನವನ್ನು ಗಮನಿಸುವುದು ಒಳ್ಳೆಯದು. ಮಗುವಿನ ಮನಸ್ಸಿನ ಇಂಥ ಕಾಲದಲ್ಲಿ ಅದಕ್ಕೆ ವಿಚಾರ, ಆಲೋಚನೆ, ಸತ್ಯ, ಸುಳ್ಳು, ಮೋಸ ಇತ್ಯಾದಿಗಳ ಕಲ್ಪನೆ ಇರುವುದಿಲ್ಲ.

ಕುವೆಂಪು ಜನ್ಮಾಂತರ ಕಲ್ಪನೆಯನ್ನು ನಂಬುವಂಥವರು. ಜನ್ಮಾಂತರ ಕಲ್ಪನೆ, ಮೂಲತಃ ವೈಧಿಕ ಕಲ್ಪನೆಯೆಂಬುದು ಗೊತ್ತಿದ್ದರೂ ಅದನ್ನು ಪ್ರತಿಪಾದಿಸುತ್ತಾರೆ. ವೈಧಿಕತೆಯ ಅನೇಕ ಮೌಢ್ಯಗಳನ್ನು ವಿರೋಧಿಸುವ ಕುವೆಂಪು ಜನ್ಮಾಂತರ ತತ್ವವನ್ನು ಸ್ವೀಕರಿಸುವುದು ಆಶ್ಚರ್ಯ ವಾಗುತ್ತದೆ. ಈ ನಂಬಿಕೆಯ ಹಿನ್ನೆಲೆಯಲ್ಲಿಯೇ ಕುವೆಂಪು "ಮಗುವಿನ ಮನಸ್ಸು ನಮಗೆ ಖಾಲಿಯಾಗಿರುವಂತೆ ಕಂಡರೂ ಅದು ಶುದ್ಧ ಶೂನ್ಯವಲ್ಲ. ಕರ್ಮನಿಯಮಗಳಂತೆ ವಿಕಾಸ ಹೊಂದಲಿರುವ ಸಂಸ್ಕಾರ ಬೀಜಕೋಟಿಗಳಿಂದ ಕೂಡಿದ್ದು, ಮುಂದೆ ಬದುಕಿನಲ್ಲಿ ಅನೇಕ ಫಲಗಳಲ್ಲಿ ಪರಿಣಾಮಗೊಳ್ಳುವ ಜೀವನಿಧಿ!" ಎನ್ನುತ್ತಾರೆ. ಈ ಹಿನ್ನೆಲೆಯಿಂದ ಕುವೆಂಪು, ಮಕ್ಕಳ ಸಾಹಿತ್ಯ ಬರೆಯುವವರಿಗೆ ಜನ್ಮಾಂತರ ಕಲ್ಪನೆಗಳನ್ನು ಅರ್ಥಮಾಡಿಕೊಳ್ಳಬೇಕು ಅನ್ನುತ್ತಾರೆ. ಮಗು ಅನೇಕ ಜನ್ಮಗಳ ಅನುಭವಸಾರವನ್ನು ಒಳಗೊಂಡಿರುತ್ತದೆ;ಮಗುವಿನಲ್ಲಿ ಅದು ಸುಪ್ತವಾಗಿರುತ್ತದೆ. ಲೇಖಕನಾದವನು ತನ್ನ ಸಾಹಿತ್ಯದ ಮೂಲಕ ಅವುಗಳ ವಿಕಾಸಕ್ಕೆ ಅನುವು ಮಾಡಿಕೊಡಬೇಕು ಎನ್ನುತ್ತಾರೆ. ಇಂಥ ಅಂಶಗಳನ್ನು ಗುರುತಿಸದ ಪಾಶ್ಚಾತ್ಯರನ್ನು ಕುವೆಂಪು ಟೀಕಿಸುತ್ತಾರೆ.

ಆದರೆ ಈ ಮಾತುಗಳನ್ನು ಒಪ್ಪಿಕೊಳ್ಳಲು ಕಷ್ಟವಾಗುತ್ತದೆ. ಜನ್ಮಾಂತರದಂಥ ಅಂಶಗಳನ್ನು ಸಾಮಾನ್ಯೀಕರಿಸಿ ಎಲ್ಲಕ್ಕೂ ಆರೋಪಿಸುವುದು ಅಷ್ಟು ವೈಜ್ಞಾನಿಕವೆನಿಸುವುದಿಲ್ಲ. ಮಕ್ಕಳಲ್ಲಿ ವೈಜ್ಞಾನಿಕ ಅರಿವಿನ ಆವಶ್ಯಕತೆಯ ಬಗ್ಗೆ ಒತ್ತಿ ಹೇಳುವ ಕುವೆಂಪು ಜನ್ಮಾಂತರವನ್ನು ಪ್ರತಿಪಾದಿಸು ವುದು ದ್ವಂದ್ವವೆನಿಸುತ್ತದೆ. ಮತೀಯತೆಯನ್ನು ತಿರಸ್ಕರಿಸುವ ಕುವೆಂಪು ಆಧ್ಯಾತ್ಮವನ್ನು ಒಪ್ಪುತ್ತಾರೆ. ಇವರ ದೃಷ್ಟಿಯಲ್ಲಿ ಆಧ್ಯಾತ್ಮವೆಂದರೆ ಒಂದು ಚಿರಂತನ ಸತ್ಯ.

" You must save our children from our religions. Let us have spirituality. But not religions. Spirituality is a fundamental scientific absolute truth. But religions are horrible. Every-where they have created conflict, terror and bloodshed."

- ಎಂದು ಅವರೇ ಆಧ್ಯಾತ್ಮ ಮತ್ತು ಮತಗಳಿಗಿರುವ ವ್ಯತ್ಯಾಸವನ್ನು ಹೇಳುತ್ತಾರೆ. ಇಲ್ಲಿ ಜನ್ಮಾಂತರ ಪ್ರಕ್ರಿಯೆಯನ್ನು ಯಾವುದರಲ್ಲಿ ಅಡಕಗೊಳಿಸುತ್ತಾರೆಂಬುದರಲ್ಲಿ ಅನುಮಾನ ಬರುತ್ತದೆ. ಆಧ್ಯಾತ್ಮವನ್ನು Fundamental Scientific Absolute truth ಎಂದು ಕರೆದಿರುವುದನ್ನು ಒಪ್ಪಿಕೊಂಡರೂ ಜನ್ಮಾಂತರವನ್ನು ಅಲ್ಲಿಗೇ ಸೇರಿಸುವುದು ಗೊಂದಲವನ್ನುಂಟು ಮಾಡುತ್ತದೆ.

ಮೇಲಿನ ಒಂದು ಅಂಶವನ್ನು ಸಂದಿಗ್ಧವಾಗಿಟ್ಟುಕೊಂಡು ಕುವೆಂಪು ಶಿಶು ಸಾಹಿತ್ಯದ ಬಗ್ಗೆ ತಳೆದಿರುವ ಮಿಕ್ಕ ಧೋರಣೆಗಳನ್ನು ಗಮನಿಸಿದರೆ ಅವು ಮನನೀಯವೆಂದು ತಿಳಿಯದಿರದು.

ಮಗುವಿನ ಮನಸ್ಸು ಬೆಳೆದಂತೆಲ್ಲಾ ಅದರ ವಿಚಾರಬುದ್ಧಿ ಜಾಗೃತವಾಗುತ್ತದೆ. ಅಂಥ ವೇಳೆಯಲ್ಲಿ ಪ್ರಾಣಿಕಥೆಗಳು ಆತ್ಮೀಯವೆನಿಸುತ್ತವೆ. ಪ್ರಾಣಿಗಳು ಮಾತಾಡುತ್ತವೆಯೇ ಎಂಬ ಪ್ರಶ್ನೆ ಮಗುವಿನ ಮನಸ್ಸಿನಲ್ಲಿ ಮೂಡುವುದಕ್ಕಿಂತ ಆ ಕಥೆಯಲ್ಲಿನ ಮಾನವೀಯ ಸಂಬಂಧಗಳಲ್ಲಿ ಮನಸ್ಸು ಲೀನವಾಗಿಬಿಡುತ್ತದೆ. ಈ ರೀತಿ ಭಾವ ಸಾಮ್ಯವನ್ನು ಕೆರಳಿಸಿ ಆ ಮೂಲಕ ಲೋಕದ ವಿವರಗಳನ್ನು ಕೊಡಬೇಕೆಂದು ಕುವೆಂಪು ಹೇಳುತ್ತಾರೆ. ಧಾರ್ಮಿಕ ಕಥೆಗಳಂತೆ ಪ್ರಾಣಿಕಥೆಗಳನ್ನು ನಂಬುವಂತೆ ಬಲವಂತಿಸುವುದಿಲ್ಲ, "ಹೀಗಾಗಿ ಮಕ್ಕಳು ತಾವು ಕೇಳಿದ ಕಾಗಕ್ಕ ಗೂಬಕ್ಕನ ಕತೆಗಳನ್ನು ಯಥಾರ್ಥವಾಗಿಯೂ, ನಡೆದ ಘಟನೆಗಳು, ಎಂದು ನಂಬಬೇಕೆಂದು ನಾವು ಭಾವಿಸುವುದೂ ಇಲ್ಲ; ಬಲಾತ್ಕರಿಸುವುದೂ ಇಲ್ಲ" ಆದರೆ ಪುರಾಣ ಅಥವಾ ಧಾರ್ಮಿಕ ಕತೆಗಳನ್ನು ನಂಬುವಂತೆ ಬಲವಂತಿಸಿ, ಮಕ್ಕಳ ಕುತೂಹಲ ಪ್ರವೃತ್ತಿ ಮತ್ತು ವಿಚಾರಶಕ್ತಿಯನ್ನು ಕುಂಠಿತಗೊಳಿಸುತ್ತೇವೆ. ಇಂಥದು ಸಲ್ಲದು ಎಂದು ಕುವೆಂಪು ಹೇಳುತ್ತಾರೆ.

"ವೈಚಾರಿಕ ಮನೋಧರ್ಮವನ್ನು ಮೊದಲಿನಿಂದಲೂ ನಾವು ಮಕ್ಕಳಲ್ಲಿ ಬಿತ್ತಿದ್ದರೆ ಮತ-ಕಲಹಗಳು ಮತ-ಮೌಢ್ಯಗಳೂ ಹುಸಿ ಮತಾಭಿಮಾನದಿಂದ ಒದಗುವ, ಅನ್ಯಮತ ದ್ವೇಷದಿಂದ ಉಂಟಾಗುತ್ತಿರುವ ಕ್ಷೋಭೆಗಳೂ, ಲೋಕದಲ್ಲಿರುತ್ತಿರಲಿಲ್ಲ." ಎಂಬ ಕುವೆಂಪು ಅವರ ಮಾತಿನಲ್ಲಿ ಐತಿಹಾಸಿಕ ಸತ್ಯವಿದೆ. ಜಗತ್ತಿನ ಯಾವುದೇ ಇತಿಹಾಸದ ಪುಟ ತೆಗೆದರೂ ಶಿಕ್ಷಣ ತೀರ ಧಾರ್ಮಿಕ ರೀತಿಯದ್ದಾಗಿದ್ದು ವ್ಯಕ್ತಿಯನ್ನು ಕುಬ್ಜಗೊಳಿಸುವ ಸಾಧನ ಮಾತ್ರವಾಗಿರುವುದು ಕಂಡುಬರುತ್ತದೆ. "ಇಂದು ಜಗತ್ತು ಹಿಂದಿನ ಜಗತ್ತಿನಂತಿಲ್ಲ. ಇಂದಿನ ಮಕ್ಕಳು ಹಿಂದಿನ ಮಕ್ಕಳಂತಿಲ್ಲ. ಮಕ್ಕಳಿಗೆ ಬೇಕಾಗಿರುವ ವಿದ್ಯೆಯ ಸ್ವರೂಪ ಇಂದಿನ ವೈಜ್ಞಾನಿಕ ಜಟಿಲ ನಾಗರಿಕ ಜೀವನಕ್ಕೆ ಹೊಂದಿಕೊಳ್ಳುವ ಪ್ರತಿಕ್ರಿಯೆಗೆ ಅವಶ್ಯವಾಗುವ ಲಕ್ಷಣದಿಂದ ಕೂಡಿರಬೇಕು."-ಹೀಗೆ ಕುವೆಂಪು ಅವರು ಯುಗ ಧರ್ಮದ ಮೇಲೆ ಒತ್ತು ಕೊಡುತ್ತಾರೆ. ಮೇಲಿನ ಅಂಶಗಳನ್ನೊಳಗೊಂಡಂತೆ ಮಕ್ಕಳ ಸಾಹಿತ್ಯ ರಚಿಸುವವನ ಮನಸ್ಸು ಕ್ರಿಯೆಗೆ ತೊಡಗಬೇಕಾಗುತ್ತದೆ. ಮಗುವಿನ ಮುಗ್ಧ ಮನಸ್ಸು ಎಲ್ಲವನ್ನೂ ಹೀರಿಕೊಳ್ಳುವಂಥದು. ಅದರ ಮೇಲೆ ಪ್ರಭಾವಬೀರುವ ಲೇಖಕ ಅದರ ಮುಂದಿನ ಭವಿಷ್ಯವನ್ನು ಸದಾ ಗಮನದಲ್ಲಿಟ್ಟುಕೊಂಡು ಎಚ್ಚರದಿಂದಿರಬೇಕಾಗುತ್ತದೆ. ಇಂದಿನ ಮಗು ಬೆಳೆದು ಭವಿಷ್ಯದಲ್ಲಿ ಒಂದು ಸಮಾಜದ ನಿರ್ಮಾಪಕನಾಗುವ ಶಕ್ತಿ ಪಡೆದಿರುತ್ತದೆ.

ಕುವೆಂಪು ಮಕ್ಕಳ ಸಾಹಿತ್ಯವನ್ನು ಮೂರು ವಿಧವಾಗಿ ವಿಂಗಡಿಸುತ್ತಾರೆ. ೧. ಶೈಶವ ಸಾಹಿತ್ಯ. ೨. ಬಾಲಸಾಹಿತ್ಯ. ೩. ಕೌಮಾರ ಸಾಹಿತ್ಯ-ಎಂದು. ಈ ಮಾತುಗಳಲ್ಲಿ ವ್ಯಕ್ತಿಯ ಭೌಧಿಕ ಹಾಗೂ ಮಾನಸಿಕ ವಿಕಾಸದ ಹಂತ ಹಂತವಿದೆ. ವಯೋಗುಣಕ್ಕೆ ತಕ್ಕಂತೆ, ಮಾನಸಿಕ ಬೆಳವಣಿಗೆಗೆ ತಕ್ಕಂತೆ, ಅವನಿಗೆ ಸಾಹಿತ್ಯ ಕೊಡಬೇಕು. ಸಾಹಿತ್ಯ ತಂದು ಕೊಡುವ ಅರಿವಿನ ಜೊತೆ ಜೊತೆಯಲ್ಲಿಯೇ

ವ್ಯಕ್ತಿಯ ಬದುಕು ಬೆಳೆಯುವಂತಾಗಬೇಕು. ಇಂಥ ಕಡೆ ಕುವೆಂಪು ಮನೋವಿಜ್ಞಾನಿಗಳ ರೀತಿಯಲ್ಲಿ ಚಿಂತಿಸುತ್ತಾರೆ. ಮಗುವಿನ ಸೂಕ್ಷ್ಮ ಮನಸ್ಸಿನ ಭಾವನೆಗಳ ಒಳ ಹೊಕ್ಕು ಅದರ ಸ್ವರೂಪ ರೂಪಿಸುವ ಶಿಶು ಸಾಹಿತ್ಯ ರಚನೆಕಾರ ಇಂಥದನ್ನು ಅವಶ್ಯಕವಾಗಿ ಗಮನಿಸಬೇಕಾಗುತ್ತದೆ.

ಶೈಶವ ಸಾಹಿತ್ಯದಲ್ಲಿ ವಿಚಾರಕ್ಕಿಂತ ಆಕರ್ಷತೆಗೆ ಅವಕಾಶವಿದೆ. ಮಗುವಿನ ಮನಸ್ಸು ರಮ್ಯ ಲೋಕದಲ್ಲಿ ಹದಗೊಂಡು ಮುಂದಿನ ಬದುಕಿನ ವಾಸ್ತವಕ್ಕೆ ಅಣಿಯಾಬೇಕಾಗುತ್ತದೆ. ಶೈಶವ ಸಾಹಿತ್ಯದಲ್ಲಿ ಲೇಖಕರು, 'ಹಕ್ಕಿಮಾತನಾಡುತ್ತದೆ' , 'ಸಿಂಹ ಹಾರಾಡುತ್ತದೆ' ಎಂದು ಬೇಕಾದರೆ ಬರೆಯಬಹುದು. ಅಲ್ಲಿ ಭಾವಾರ್ಥಕ್ಕೆ ಬೆಲೆಯುಂಟೇ ಹೊರತು ವಾಚ್ಯಕ್ಕಿಲ್ಲ. ಚಿಕ್ಕ ಮಕ್ಕಳ ಆಟಪಾಟಗಳನ್ನು ಗಮನಿಸಿದರೆ ಈ ಸೂಕ್ಷ್ಮವನ್ನು ಅರಿಯಬಹುದು.

ಮಗು ಶೈಶವವನ್ನು ದಾಟಿದ ನಂತರ ಅದರ ಮನೋವ್ಯಾಪಾರ ಕೂಡ ಬೆಳೆದಿರುತ್ತದೆ. ಅದರ ಮಾನಸಿಕ ಹಸಿವಿಗೆ ತಕ್ಕಂಥ ಸಾಹಿತ್ಯವನ್ನು ಆಗ ನಾವು ಒದಗಿಸಬೇಕು. ಆದುದರಿಂದ ಬಾಲ ಸಾಹಿತ್ಯದಲ್ಲಿ ವೈಜ್ಞಾನಿಕ ಹಾಗೂ ವೈಚಾರಿಕ ಅಂಶಗಳನ್ನು ಹೇಳಿ, ಮಕ್ಕಳಲ್ಲಿ ವೈಜ್ಞಾನಿಕ ಹಾಗೂ ವೈಚಾರಿಕ ದೃಷ್ಟಿಕೋನಗಳು ಬೆಳೆಯುವಂತಾಗಲು ಲೇಖಕ ಶ್ರಮಿಸಬೇಕು. ಈ ಅಂಶಗಳನ್ನು ಪಾರಿಭಾಷಿಕಗೊಳಿಸದೆ ಸುಲಭ ರೀತಿಯಲ್ಲಿ ಅರ್ಥವಾಗುವಂತೆ ಬರೆಯಬೇಕು, ಎಂದು ಕುವೆಂಪು ತಿಳಿಸುತ್ತಾರೆ. ಬುದ್ಧಿಯನ್ನು ಕೆರಳಿಸುವಂಥ ಸಾಹಿತ್ಯ, ಬೆಳೆಯುವ ಮಗುವಿಗೆ ಅವಶ್ಯಕ. ಮಗುವಿನ ಮನಸ್ಸನ್ನು, ಕೂತೂಹಲ ಪ್ರವೃತ್ತಿಯನ್ನು ಕೆರಳಿಸುವಂಥ ಸಾಹಿತ್ಯ ಅವಶ್ಯಕ.

ಶಿಶು ಸಾಹಿತ್ಯದಲ್ಲಿ ಮತೀಯಾಂಶಗಳನ್ನು ತರುವುದನ್ನು ಕುವೆಂಪು ತೀವ್ರವಾಗಿ ವಿರೋದಿಸುತ್ತಾರೆ. ಮಾನವರಲ್ಲಿ ಐಕ್ಯ, ಸಾಮರಸ್ಯ, ಸೋದರತ್ವಗಳನ್ನು ತರುವ ಉದ್ದೇಶಗಳಿಂದ ಹುಟ್ಟಿಕೊಂಡ ಮತಗಳು, ತಮ್ಮ ಉದ್ದೇಶದಿಂದ ಭಿನ್ನವಾಗಿ ಅಸಮಾನತೆ, ಯುದ್ಧ, ರಕ್ತಗಳನ್ನು ತಂದು ಮಾನವಕುಲವನ್ನು ಅಶಾಂತಿಯ ಕಡಲಲ್ಲಿ ನೂಕಿರುವುದರಿಂದ, ಅವನ್ನು ಬಹಿಷ್ಕರಿಸಬೇಕು ಎಂದು ಕುವೆಂಪು ಬರೆಯುತ್ತಾರೆ. ಮತಗಳು ಮಾನವಕುಲದಲ್ಲಿ ಉಂಟುಮಾಡಿರುವ ವೈಪರೀತ್ಯಗಳನ್ನು, ಅನಾಹುತಗಳನ್ನು, ಮಕ್ಕಳಿಗೆ ಅರ್ಥವಾಗುವಂತೆ ಬರೆದು, ಮಕ್ಕಳ ಮನಸ್ಸು ವಿಶಾಲಗೊಳ್ಳುವಂತೆ ಮಾಡಬೇಕು. "ಹಳೆಯ ಮೌಲ್ಯಗಳನ್ನು ಕುರಿತು ಬರೆಯುವಾಗ ಈ ಹೊಸ ದೃಷ್ಟಿಗೆ ಅನುಗುಣವಾಗುವಂತೆ ಅವನ್ನು ಪರಿವರ್ತಿಸಿ ಬರೆಯಬೇಕು" ಎನ್ನುತ್ತಾರೆ.

"ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲೂ ಕೂಡ ಒಂದು ತೊಟ್ಟಿಲು ತೂಗುತ್ತಾ ಇರುತ್ತೆ. ಆ ತೊಟ್ಟಿಲಲ್ಲಿ ಅವನ ಶಿಶುತ್ವ ಅಸ್ಖಲಿತವಾಗಿ, ಮುಗ್ಧವಾಗಿ ಇರುತ್ತೆ. ತುಂಬಾ ವಿಶೇಷ ಹಾಗೂ ಪ್ರಶಾಂತ ಸಮಯಗಳಲ್ಲಿ ಆ ಶಿಶು ಎಚ್ಚರವಾಗಿರುತ್ತದೆ." ಎಂಬ ಕುವೆಂಪು ಅವರ ಮಾತು ತುಂಬಾ ವೈಜ್ಞಾನಿಕವಾಗಿದ್ದು, ಶಿಶು ಸಾಹಿತ್ಯವು ಎಲ್ಲರಿಗೂ ಅತ್ಯಗತ್ಯವಾಗಿ ಬೇಕಾದ್ದು ಎಂಬುದನ್ನು ಧ್ವನಿಸುತ್ತದೆ.

'ಅಮಲನ ಕಥೆ' ಕುವೆಂಪು ಅವರ ಮೊತ್ತ ಮೊದಲ ಪ್ರಕಟಿತ ಕೃತಿ. ಕುವೆಂಪು ಅವರು ತೀರಾ ಇತ್ತೀಚೆಗೆ ಪ್ರಕಟಿಸಿದ ಕೃತಿ 'ನರಿಗಳಿಗೇಕೆ ಕೋಡಿಲ್ಲ?' ಎಂಬುದು. ಈ ಎರಡು ಕೃತಿಗಳು ಕೂಡಾ ಮಕ್ಕಳ ಸಾಹಿತ್ಯವೇ. ಈ ಎರಡರ ಮಧ್ಯೆ ಕುವೆಂಪು ಅವರ ಶ್ರೇಷ್ಠ ಸಾಹಿತ್ಯ ಸಾಧನೆ ನಿಂತಿದೆ.

Educative ಆಗಿರಬೇಕಾದ ಶಿಶು ಸಾಹಿತ್ಯದ ಬಗ್ಗೆ ಕುವೆಂಪು ಅವರು ತಳೆದಿರುವ ದೃಷ್ಟಿಯಲ್ಲಿ ಪ್ರಯೋಜನವಿದೆ. ಜಾತಿ ವರ್ಗಗಳ ಅಪಾಯದ ಸೂಕ್ಷ್ಮತೆಯನ್ನು ಅದು ಒತ್ತಿ ಹೇಳುತ್ತಾ ಸಾಗುವುದರಿಂದ ಮಾನವ ಕುಲದ ಸಾಮರಸ್ಯದ ಸಾಧನೆಗೆ ಅನುಕೂಲವಾಗುತ್ತದೆ.

* * *

# ಆಧುನಿಕ ಬರಹಗಾರರ ಮೇಲೆ ಕುವೆಂಪು ಸಾಹಿತ್ಯ ಮತ್ತು ವ್ಯಕ್ತಿತ್ವದ ಪ್ರಭಾವ

ಒಂದು ಜನಪದ ಪರಿಸರದಲ್ಲಿ ಒಬ್ಬ ವ್ಯಕ್ತಿಯು ಕವಿಯಾಗಿ, ಚಿಂತಕನಾಗಿ, ತನ್ನ ಪ್ರಭಾವದ ತೆಕ್ಕೆಗೆ ತನ್ನ ಸುತ್ತ ಮುತ್ತ ಸುಳಿದವರನ್ನೆಲ್ಲಾ, ಒಳಗು ಮಾಡಿಕೊಳ್ಳುವುದು ಅಂಥ ಆಶ್ಚರ್ಯವಲ್ಲ. ಅದು ಯಾವಾಗ ಅಂದರೆ, ಆ ಕವಿ ಇತರೆ ಕವಿಗಳಿಗಿಂತ ಭಿನ್ನವಾದ ಸೃಷ್ಟಿಯನ್ನು ಮಾಡಿದ್ದಾಗ; ಭಿನ್ನ ಸೃಷ್ಟಿ ಇಡೀ ಒಂದು ಜನಾಂಗದ 'ಪ್ರತಿಬಿಂಬ-ಗತಿಬಿಂಬ' ಆದಾಗ. ಆ ಕವಿ ತಾನು ಬೆಳೆದು ಬಂದಿರುವ ಸಾಹಿತ್ಯ ಪರಂಪರೆಯ ಇತಿಹಾಸದಲ್ಲಿ ತನ್ನ ಕೊಡುಗೆಯಿಂದಾಗಿ ಹೊಸ ಅಧ್ಯಾಯವನ್ನು ಸೇರಿಸುವುದರ ಮೂಲಕ, ಆ ಜನಪದ ಆವರೆಗೆ ಕಂಡರಿಯದ ಹೊಸ ಆಲೋಚನೆ ಚಿಂತನೆಗಳಿಂದ ಪುಳಕಿತಗೊಂಡು ಯೋಚನೆ ಮಾಡಲು ಪ್ರಾರಂಭಿಸುವಂತೆ ಮಾಡುತ್ತಾನೆ. ಕುವೆಂಪು ಅಂಥ ಕವಿ. ಕರ್ನಾಟಕ ಸಾಹಿತ್ಯದಲ್ಲಿ ' ಪ್ರಾದೇಶಿಕ ' ಅನ್ನಬಹುದಾದ ನಿಜ ಜೀವನದ ಚಿತ್ರ ಕೊಡುವುದರ ಮೂಲಕ ಸಾಹಿತ್ಯಕ್ಕೆ ಹೊಸ ಶಕ್ತಿ ರೂಪಗಳನ್ನು ತಂದು ಕೊಟ್ಟ ಮೊದಲ ಕವಿ. ಪ್ರಾದೇಶಿಕ ಚಿತ್ರ ರಾಘವಾಂಕ, ಪಂಪ, ಆಂಡಯ್ಯ, ರತ್ನಾಕರವರ್ಣಿ ಮೊದಲಾದವರಲ್ಲಿ ಅಲ್ಲಲ್ಲಿ ಬಂದಿದ್ದರೂ ಅದೇ ಪ್ರಧಾನವಲ್ಲ, ಅದು ಕೇವಲ ಮೂಲ ಕತೆಯನ್ನು ಬೆಳೆಸುವಲ್ಲಿ ಬರುವ ಕವಿ ಉಲ್ಲೇಖ ವರ್ಣನೆಗಳು ಮಾತ್ರ. ಅದು ಜನ ಜೀವನದ ನೈಜ ಚಿತ್ರಣವಾಗಿ ಬಂದಿರುವುದು ಕೂಡ ಅಪರೂಪ. ಕುವೆಂಪು ತಮ್ಮ ಕಾದಂಬರಿಗಳಲ್ಲಿ, ಕತೆ, ವ್ಯಕ್ತಿ ಚಿತ್ರಗಳಲ್ಲಿ, ತಮ್ಮ ಪದ್ಯಗಳಲ್ಲಿ ನಮ್ಮ ಪರಿಸರ-ಬದುಕನ್ನು ಅತ್ಯಂತ ಅರ್ಥವತ್ತಾಗಿ ಹಿಡಿದಿಟ್ಟಿದ್ದಾರೆ ಎಂಬ ಸಾಮಾನ್ಯಾಂಶ-ಅವರ ಕೃತಿಗಳನ್ನು ಓದಿದಾಗ ಗೊತ್ತಾಗಿಬಿಡುತ್ತದೆ.

ಅಡಿಗರನ್ನು ಕುರಿತು ಪಿ.ಲಂಕೇಶ್ ಒಮ್ಮೆ 'ಒಂದು ಜನಾಂಗದ ಕಣ್ಣು ತೆರೆಸಿದ ಕವಿ' ಎಂದು ಬರೆದರು. ಬರೆದಾದ ಕೆಲವು ವರ್ಷಗಳ ನಂತರ ಆಮಾತನ್ನು ವಾಪಸ್ಸು ಪಡೆದರು. ಕನ್ನಡದ ಇನ್ನೊಬ್ಬ ಕವಿ, ಇದೇ ಮಾತನ್ನು ತುಂಬಾ ವ್ಯಂಗ್ಯವಾಗಿ "ಅಡಿಗರು ಒಂದು ಜನಾಂಗದ ಕಣ್ಣನ್ನು ಮಾತ್ರ ತೆರೆಸಿದ ಕವಿ" ಎಂದು ಕರೆದರು. ಈ ವ್ಯಂಗ್ಯದ ಅರ್ಥವನ್ನು ಬಿಡಿಸಿ ಹೇಳಬೇಕಿಲ್ಲ. ಅಡಿಗರು ನನ್ನ ದೃಷ್ಟಿಯಲ್ಲಿ ತೀರ ಸರಳ ಕವಿಯೇನಲ್ಲ. ಭಾಷೆ ಮತ್ತು ರೂಪಗಳ ಪ್ರಯೋಗದ ದೃಷ್ಟಿಯಿಂದ ಅವರ ಕೊಡುಗೆ ಏನು? ಹೊರ ರೂಪದ ವೈವಿಧ್ಯದಂತೆಯೇ ಅಂತರಂಗದ ಸತ್ತ್ವವೂ ಬಹಳ ಮುಖ್ಯ ಅಲ್ಲವೆ? ಕನ್ನಡ ಬದುಕನ್ನು ತೀವ್ರವಾಗಿ ಅಲ್ಲಾಡಿಸಿದ, ವಸ್ತುವಿನ ದೃಷ್ಟಿಯಿಂದ ಸಾಹಿತ್ಯವನ್ನು ಮತ್ತೊಂದು ಅಧ್ಯಾಯಕ್ಕೆ ನಡೆಸಿದ ಅಡಿಗರ ಕೊಡುಗೆ ಏನು? ಕೆ.ಎಸ್.ನರಸಿಂಹಸ್ವಾಮಿಯವರ ಕಥನ ಕವನಗಳ ರೂಪದ ಪದ್ಯಗಳು ವಾತ್ಸಲ್ಯ, ಪ್ರೀತಿ,

ಸುಕುಮಾರತೆ. ಬದುಕಿನ ರಂಪ-ನೋವು, ಸಾಂಸಾರಿಕ ರೂಪಕಗಳ ಜೊತೆಯಲ್ಲಿಯೇ ಬದುಕನ್ನು ಹಿಡಿದಿಡುತ್ತವೆ. ಬದುಕನ್ನು ದುರಂತ ಛಾಯೆಯಡಿಗೆ ಕರೆದೊಯ್ಯುವ ನಮ್ಮ ರಾಜಕೀಯ, ಧಾರ್ಮಿಕವಾಗಿ ತಮ್ಮ ಪದ್ಯಗಳಲ್ಲಿ ಚಿಂತಿಸಿದರೂ ರಚನೆಯಲ್ಲಿರುವ ಶುಷ್ಕತೆ ಮತ್ತು ಅಸಂಗತ್ವ ದಿಂದಾಗಿ ಸಂವಹನ ಕ್ರಿಯೆಯಲ್ಲಿ ಅಡಿಗರು ಸೋಲುತ್ತಾರೆ. ಈ ದೃಷ್ಟಿಯಿಂದಲಾದರೂ ಕುವೆಂಪು-ಬೇಂದ್ರೆ ಅನಂತರದ ಸಾಹಿತ್ಯದಲ್ಲಿ ಕೆ.ಎಸ್. ನರಸಿಂಹಸ್ವಾಮಿಯವರನ್ನು ಅಧ್ಯಯನ ಮಾಡಬೇಕಾಗಿದೆ.

ಅಡಿಗ, ಕೆಎಸ್‌ನ ಅವರ ಮೇಲೂ ಪ್ರಭಾವ ಬೀರಿದ ಕುವೆಂಪು-ಬೇಂದ್ರೆ ಸಾಹಿತ್ಯ ಇತ್ತೀಚಿನ ಲೇಖಕರನ್ನೂ ಪ್ರಭಾವದ ವಲಯದಲ್ಲಿಟ್ಟುಕೊಂಡು ಬಂದಿರುವುದೇ ಅದರ ಶ್ರೇಷ್ಠತೆಗೆ ಸಾಕ್ಷಿ. ಬೇಂದ್ರೆಯವರಿಗಿಂತಲೂ ಸಾಹಿತ್ಯದ ವಿವಿಧ ಪ್ರಕಾರಗಳ ಪ್ರಯೋಗ ನಡೆಸಿ ಸಿದ್ಧಿಪಡೆದಿರುವ ಕುವೆಂಪು ಸುಮಾರು ೫೦-೬೦ ವರ್ಷಗಳಿಂದ ನಿರಂತರವಾಗಿ ವಿಮರ್ಶೆ ವಿಶ್ಲೇಷಣೆಗಳಿಗೆ ಒಳಗಾಗಿದ್ದಾರೆ. ನವೋದಯದ ಆಗ್ರಗಣ್ಯ ಲೇಖಕರಾದ ಕುವೆಂಪು ತಮ್ಮ ಕಾಲದ ಲೇಖಕರ ವಿಮರ್ಶೆ ಟೀಕೆಗಳಿಗೆ ಮಾತ್ರವಲ್ಲದೆ, ನವ್ಯ, ಬಂಡಾಯ ಲೇಖಕರ ವಿಮರ್ಶೆಗೂ ವಸ್ತುವಾಗಿ ಸವಾಲಾಗಿ ನಿಂತಿದ್ದಾರೆ. ಯಾವ ಲೇಖಕ ಪ್ರತಿ ದಶಕ-ಶತಕಗಳಲ್ಲಿ ಹೊಸ ಹೊಸ ಸಿದ್ಧಾಂತಗಳ ಆಲೋಚನ ಕ್ರಮಗಳ ವಿಶ್ಲೇಷಣೆಗೆ ಒಳಗಾಗಿಯೂ ಬೆಳೆಯುತ್ತಾ ಸಾಗುತ್ತಾನೋ ಅವನು ಶ್ರೇಷ್ಠನಾಗುತ್ತಾನೆ; ಸಾರ್ವತ್ರಿಕ ಕವಿಯಾಗುತ್ತಾನೆ. ಪಂಪ, ಕುಮಾರವ್ಯಾಸರಂತೆ ಕುವೆಂಪು ಸಾರ್ವತ್ರಿಕ ಮೌಲ್ಯಗಳ ಪ್ರತಿಪಾದನೆಯಲ್ಲಿ, ಮಾನವೀಯತೆಯ ಸಾಕ್ಷಿ ರೂಪವಾದ ಸಾಹಿತ್ಯ ರಚನೆಯಲ್ಲಿ ತೊಡಗಿದವರು. ಪಂಪ, ಕುಮಾರವ್ಯಾಸರ ಹಿರಿಯ ಹೆಗಲ ಮೇಲೆ ಕುಳಿತು ಇನ್ನೂ ದೂರ ನೋಡಿದವರು. ಸಾಹಿತ್ಯದಲ್ಲಿ 'ಶ್ರೀಸಾಮಾನ್ಯ'ನನ್ನು ನಾಯಕನನ್ನಾಗಿಸಿದವರು ಅಥವಾ ಅಸಮಾನ್ಯನನ್ನು ಸಾಮಾನ್ಯನ ಮಟ್ಟಕ್ಕಿಳಿಸಿದವರು. ('ಶ್ರೀ ರಾಮಾಯಣ ದರ್ಶನಂ' ಕಾವ್ಯದ ಶ್ರೀರಾಮ ಮಹಾಪುರುಷನು ಹೇಗೋ ಹಾಗೆಯೇ ಸಾಮಾನ್ಯ. ಸಾಮಾನ್ಯರಂತೆ ಎಲ್ಲ ಪರೀಕ್ಷೆಗೂ ಒಳಗುತ್ತಾನೆ; ನಗುತ್ತಾನೆ; ಹೊಟ್ಟೆಯುರಿ ಪಡುತ್ತಾನೆ. ಕಾವ್ಯದ ಕೊನೆ ಭಾಗದಲ್ಲಿ ಸೀತೆಯಂತೆ ರಾಮನು ಕೂಡ ಅಗ್ನಿ ಪ್ರವೇಶ ಮಾಡುವ ಕಲ್ಪನೆ ಯುಗ ಧರ್ಮದ ಸಂಕೇತ.) ಗುತ್ತಿ, ಐತ, ತಿಮ್ಮ, ಕರಿಸಿದ್ಧ ಮಾತ್ರವಲ್ಲ, ಗುತ್ತಿನಾಯಿಯೂ ಕೂಡ ಜೀವಂತ ಪಾತ್ರವಾಗುವುದರ ಮೂಲಕ ತಲತಲಾಂತರಗಳಿಂದ ಹೆಸರಿಲ್ಲದ ಉಸಿರಿಲ್ಲದ ಯಕಶ್ಚಿತ್ ಜೀವಿಯೂ ಕೂಡ ಅಸಾಮಾನ್ಯದಷ್ಟೇ ಪ್ರಮುಖವಾಗಿ ನಡೆದಾಡಿಬಿಡುತ್ತದೆ. ಗುತ್ತಿ-ತಿಮ್ಮಿಯರ ಪಾತ್ರಗಳು ಶ್ರೀರಾಮ-ಸೀತೆಯರಿಗಿಂತ ಯಾವ ಅರ್ಥದಲ್ಲೂ, ಕಡಿಮೆ ಇಲ್ಲದ ಆಧ್ಯಾತ್ಮ ಸ್ತರವನ್ನು ತಲುಪುತ್ತವೆ; ಸಫಲವಾಗುತ್ತವೆ. ಶೋಷಿತ ಬದುಕಿನ ಸ್ವಾಭಿಮಾನ ಸಾಹಸಗಳಿಗೆ ಸಂಕೇತವಾಗಿ, ಉಜ್ವಲ ಮಾನವೀಯ ಪ್ರೇಮ ಮೂರ್ತಿಗಳಾಗಿ ನಿಲ್ಲುತ್ತವೆ. ಇಂಥ ಪಾತ್ರ ಸೃಷ್ಟಿಗಳಿಂದ ಜೀವನ ಪರಿಕ್ರಮವನ್ನು ಬಿಡಿಸುತ್ತಾ ತಮ್ಮ ಸಾಹಿತ್ಯದಲ್ಲಿ ಅಸಾಮಾನ್ಯ ಹಾಸ್ಯಯುಕ್ತ ರಸಿಕತನದಿಂದ ಬದುಕನ್ನು ಪ್ರೀತಿಸಿದ ಕವಿ ಕನ್ನಡದಲ್ಲಿ ಮತ್ತೊಬ್ಬನಿಲ್ಲ. ಬದುಕನ್ನು, ತನ್ನ ಪರಿಸರವನ್ನು ಯಾರು ಪ್ರೀತಿಸುತ್ತಾರೋ ಆತ

ಮಾತ್ರ, ಆತನ ಪರಿಸರದ ಎಲ್ಲ ಕೊಳಕು ಅನಿಷ್ಟಗಳನ್ನು ನಿವಾರಿಸಲು ತೊಡಗುತ್ತಾನೆ. ಈ ಮನೋಧರ್ಮವೇ ಇಡೀ ಕುವೆಂಪು ಸಾಹಿತ್ಯದಲ್ಲಿ ಪ್ರಧಾನವಾಗಿ ಎದ್ದು ಕಾಣುವ ಅಂಶ. ಎಲ್ಲ ಶೋಷಣೆಗಳ ವಿರುದ್ಧ ಬಂಡೇಳಬೇಕೆಂದು ತಮ್ಮ ವಿಚಾರ ಸಾಹಿತ್ಯದಲ್ಲಿ ನೇರವಾಗಿ ಯುವ ಜನತೆಗೆ ಕರೆ ನೀಡುತ್ತಾರೆ. 'ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ' ಎಂದು ತಿಳಿಹೇಳಿದ್ದಾರೆ. ವರ್ಗಬೇಧವಿಲ್ಲದೆ ಸಮಾನತೆಯ ತಳಹದಿಯ ಮೇಲೆ ಬದುಕುಮಾಡಬೇಕೆಂದು ಹೇಳುವುದೇ ಕುವೆಂಪು ಅವರ ಜೀವನದ ನಿತ್ಯ ಜಪ.

ಹೀಗೆ ಕಳೆದ ೫೦-೬೦ ವರ್ಷಗಳಿಂದ ಒಂದೇ ಸಮನೆ ನಾಡಿನ ಆಲೋಚನಾಕ್ರಮದ ಮೇಲೆ, ಸೃಜನಶೀಲ ವ್ಯಕ್ತಿಗಳ ಮೇಲೆ ಕುವೆಂಪು ಅವರ ಪ್ರಭಾವ ನೇರವಾಗಿ ಅಥವಾ ಪರೋಕ್ಷವಾಗಿ ಆಗಿದೆ.

ಈ ನನ್ನ ಲೇಖನದ ಮುಖ್ಯ ಉದ್ದೇಶ-ಕುವೆಂಪು ಪ್ರಭಾವ ಸಾಹಿತ್ತಿಕವಾಗಿ ಹಾಗೂ ವೈಯಕ್ತಿಕವಾಗಿ ನಮ್ಮ ಆಧುನಿಕ ಬರಹಗಾರರ ಮೇಲೆ ಹೇಗೆ ಆಗಿದೆ ಎಂಬುದನ್ನು ಮೇಲ್ನೋಟಕ್ಕೆ ಅಭ್ಯಸಿಸುವುದು. ಇದು ನನ್ನ ಲೇಖನದ ಮಿತಿಯೂ ಹೌದು ಎಂಬುದನ್ನು ಒಪ್ಪಿಕೊಳ್ಳುತ್ತೇನೆ. ಈ ಮಿತಿಯ ಒಳಗೆ ಕುವೆಂಪು ಪ್ರಭಾವ ನಮ್ಮ ಬರಹಗಾರರ ಮೇಲೆ ಹೇಗೆ ಆಗಿದೆ; ಆ ಪ್ರಭಾವದಿಂದ ನಮ್ಮ ಬರಹಗಾರರು ಹೊರ ಬಂದು ಇನ್ನೂ ಎತ್ತರಕ್ಕೆ ಅಥವಾ ಭಿನ್ನವಾಗಿ ಬೆಳೆದಿದ್ದಾರೆಯೇ? ಹೊಸ ಎರಡು ಸಾಹಿತ್ಯ ಪಂಥಗಳ ಲೇಖಕರು ಕುವೆಂಪು ಅವರನ್ನು ಹೇಗೆ ಕಂಡರು? ಈ ಎಲ್ಲ ಪ್ರಕ್ರಿಯೆಯಲ್ಲಿ ಕುವೆಂಪು ಮತ್ತು ಕುವೆಂಪು ಸಾಹಿತ್ಯ ಬೆಳೆದು ಬಂದ ಬಗೆ ಎಂಥದು?ಈ ಅಂಶಗಳನ್ನು ವಿಶ್ಲೇಷಣೆ ಮಾಡುವುದಕ್ಕೆ ಪ್ರಯತ್ನ ಪಟ್ಟಿದ್ದೇನೆ.

ಕುವೆಂಪು ಅವರ ನೇರ ಪ್ರಭಾವಕ್ಕೆ ಸಿಕ್ಕಿದವರು ಅವರ ಶಿಷ್ಯರು. ಕೇವಲ ಸಾಹಿತಿಯಾಗಿ ಮಾತ್ರ ಅವರನ್ನು ಈ ಶಿಷ್ಯರು ಕಂಡದ್ದು ಅಪರೂಪ. ಸಾಹಿತಿಯ ಜೊತೆಯಲ್ಲಿ ಗುರು ಭಾವವನ್ನೂ ಕಂಡು, ಕುವೆಂಪು ಅವರ ಬಗ್ಗೆ ಭಯ ಭಕ್ತಿ ಗೌರವ ಸಂಮಿಶ್ರ ಭಾವದಿಂದ ಅಧ್ಯಯನ ಮಾಡಲು ತೊಡಗಿದರು. ಕುವೆಂಪು ಅಂಥ ಲೇಖಕ ಗುರುವಾಗಿ ದೊರತದ್ದೇ ಧನ್ಯತೆ ಪಡೆದಷ್ಟು ಆತ್ಮಾನಂದ! ಈ ಧನ್ಯತೆ, ಆತ್ಮಾನಂದದಿಂದ ಕುವೆಂಪು ಅವರನ್ನು ಒಬ್ಬ ಸೃಜನಶೀಲ ಲೇಖಕನಾಗಿ ಅಧ್ಯಯನ ಮಾಡದೆ ಕುವೆಂಪು ಹೇಳಿದ್ದೆಲ್ಲಾ, ಕುವೆಂಪು ಬರೆದದ್ದೆಲ್ಲಾ ಅಮೃತವಾಣಿಯೆಂದು ಪರಿಗಣಿಸಿದರು. ಬಹುಪಾಲು ಕುವೆಂಪು ಶಿಷ್ಯರು ಕುವೆಂಪು ಅವರ ಪದ್ಯ ಸಾಹಿತ್ಯವನ್ನು ಮಾತ್ರ ಹಾಡಿ ಹೊಗಳಿರುವುದು ಈ ದೃಷ್ಟಿಯಿಂದ ಗಮನಾರ್ಹ. ಪ್ರಕೃತಿಯ ಜೊತೆ ಬೆರೆತು ಒಂದಾಗುವ ಭಾವತನ್ಮಯತೆ, ಭಾವುಕತನಗಳನ್ನು ಮಾತ್ರ ಗುರುತಿಸಿಕೊಳ್ಳುತ್ತಾ-ಕುವೆಂಪು ಅವರ ಪ್ರಕೃತಿ ಪ್ರೇಮದ ಹಿಂದಿನ ನೈಸರ್ಗಿಕ ಕಾಳಜಿಯನ್ನೂ; ಪ್ರಕೃತಿಯನ್ನು 'ಶ್ರೀ ಸಾಮಾನ್ಯ' ನಷ್ಟೇ ಸಾಮಾನ್ಯೀಕರಿಸಿ ಜೀವಂತ ಪಾತ್ರವಾಗಿಸಿದ ಕಲಾ ಪ್ರತಿಭೆಯನ್ನು, ಪ್ರಕೃತಿ-ಮನುಷ್ಯರ ಅವಿನಾಭಾವ ಸಂಬಂಧವನ್ನು ಹೇಳುವ ಕವಿಯ ಚಿಕಿತ್ಸಕ ಮನೋಧರ್ಮವನ್ನು ಅರಿಯಲು ಪ್ರಯತ್ನ ಪಡಲಿಲ್ಲ. ಅದರ ಬದಲು ಕುವೆಂಪು ಅವರನ್ನು ಓದುವುದರಲ್ಲಿ ಮೈಮರೆತು ಮಗ್ನರಾಗಿ ಆರಾಧನೆ ಮಾಡಲು ಪ್ರಯತ್ನಿಸಿದರು.

ಇದರಿಂದ ಏನಾಯಿತು?

ಕುವೆಂಪು ಗದ್ಯದ ಪ್ರಾಮುಖ್ಯತೆ ನವ್ಯದವರು ಬರುವವರೆಗೆ ಪ್ರಕಟವಾಗಲಿಲ್ಲ. ನವೋದಯದ ಕುವೆಂಪು ಶಿಷ್ಯರು 'ಕಾನೂರು ಹೆಗ್ಗಡತಿ' ಯನ್ನು ಕುರಿತು ಬರೆದಿದ್ದರೂ ಅದು ನಾಯಕನಾದ ಹೂವಯ್ಯನ ಸಚ್ಚಾರಿತ್ರಗಳನ್ನು ಬಣ್ಣಿಸುವುದರಲ್ಲೇ ಉಳಿದುಹೋಗಿದೆ. ಮಲೆನಾಡಿನ ಜೀವನದ ಅತ್ಯಂತ ಸೂಕ್ಷ್ಮ ಸೂಕ್ಷ್ಮ ವಿವರಗಳೂ ಕಲಾತ್ಮಕ ಚೌಕಟ್ಟಿನಲ್ಲಿ ತನ್ನನ್ನೇ ನಾಚಿಸಿಕೊಳ್ಳುವಷ್ಟು ರೂಪ ಪಡೆದುಕೊಂಡದ್ದು ಕುವೆಂಪು ಅವರ ಗದ್ಯದಲ್ಲಿ. ಈ ವಿವರಗಳು, ಚಿತ್ರಗಳು ಯಾವ ಸೋಗು, ಪೂರ್ವಗ್ರಹವಿಲ್ಲದೆ 'ದೂರ' ಕಾಯ್ದುಕೊಂಡ ವಸ್ತುನಿಷ್ಠ ದೃಷ್ಟಿಕೋನದಿಂದ ಮೂಡಿಬಂದ ಮಲೆನಾಡಿನ ಸಣ್ಣತನ, ವರ್ಗಹೋರಾಟ, ಪುರೋಹಿತ ಶಾಹಿಯ ಕುಹಕತನ, ನೆಲಕಚ್ಚಿದ ನೆಲದ ಮಕ್ಕಳ ಮುಗ್ಧತನ, ಆ ಮುಗ್ಧತನದಿಂದಲೇ ಅವರು ಎಲ್ಲರಿಗಿಂತಲೂ ಶ್ರೇಷ್ಠ ಜೀವಿಗಳಾಗುವಂಥ ಪ್ರಾಮಾಣಿಕ ಹೋರಾಟದ ಆಶಯವನ್ನೂ ಕುವೆಂಪು ಕಾದಂಬರಿಗಳು ಸ್ಪಷ್ಟವಾಗಿ ಹೇಳುತ್ತಾ ಕವಿಯ ಮನೋಧರ್ಮವಾದ ಸರ್ವೋದಯದ ಸಶಕ್ತ ಅಭಿವ್ಯಕ್ತಿಗಳಾಗುತ್ತವೆ.

ಕುವೆಂಪು ಶಿಷ್ಯರಲ್ಲಿ ಮುಖ್ಯರಾದ ಡಾ|| ಪ್ರಭುಶಂಕರ, ಡಾ.ದೇಜಗೌ, ಸುಜನಾ, ಡಾ. ತಿಪ್ಪೇರುದ್ರಸ್ವಾಮಿ, ಡಾ. ಚಿದಾನಂದಮೂರ್ತಿ ಮತ್ತು ಡಾ. ಜಿ. ಎಸ್. ಶಿವರುದ್ರಪ್ಪ-ಇವರ ಸಾಹಿತ್ಯ ರಚನೆಯ ಕಡೆ ಗಮನ ಹರಿಸಿದಾಗ, ನನ್ನ ಮೇಲಿನ ಮಾತುಗಳಿಗೆ ಆಧಾರ ದೊರೆಯುತ್ತದೆ. ಇವರಲ್ಲಿ ಚಿದಾನಂದಮೂರ್ತಿ ಮತ್ತು ಜಿ.ಎಸ್. ಶಿವರುದ್ರಪ್ಪ ಸಂಶೋಧನಾತ್ಮಕವಾಗಿ ಹಾಗೂ ಸೃಜನಾತ್ಮಕವಾಗಿ ಬೆಳೆದಿದ್ದಾರೆ. ಕುವೆಂಪು ಅವರಿಂದ ಕಲಿತದ್ದನ್ನು ಆರೋಗ್ಯಪೂರ್ಣವಾಗಿ ಜೀರ್ಣಿಸಿಕೊಂಡು, ಬೆಳೆಸಿಕೊಂಡು, ತಮ್ಮ ದಾರಿಗಳನ್ನು ಕಂಡುಕೊಂಡಿದ್ದಾರೆ. ಚಿದಾನಂದಮೂರ್ತಿ ತಮ್ಮ ಸಂಶೋಧನೆಗೆ ಕುವೆಂಪು ಅವರಿಗಿಂತ ಡಿ.ಎಲ್.ಎನ್. ಮತ್ತು ತೀನಂಶ್ರೀ ಅವರಿಂದ ಪ್ರಭಾವಿತರಾಗಿದ್ದು ಅಧಿಕ. ಡಿ.ಎಲ್.ಎನ್ ಮತ್ತು ತೀನಂಶ್ರೀ ಅವರಿಗಿಂತ ಪಾಂಡಿತ್ಯ, ವಿದ್ವತ್‌ಗಳಲ್ಲಿ ಹೆಚ್ಚು ಬೆಳೆದು ನಿಂತಿರುವುದು ಕೂಡ ಸತ್ಯ. ಈ ದೃಷ್ಟಿಯಿಂದ ಡಿ.ಎಲ್.ಎನ್. ಮತ್ತು ತೀನಂಶ್ರೀ ಪುಣ್ಯವಂತರು.

ಜಿ.ಎಸ್. ಶಿವರುದ್ರಪ್ಪ ಕವಿ, ಕಾದಂಬರಿಯ ಪ್ರಯೋಗ ಮಾಡಿರುವುದೂ ಉಂಟು. ಕುವೆಂಪು ಶಿಷ್ಯರಲ್ಲಿ ವಿಮರ್ಶಕರಾಗಿ ಹೆಚ್ಚು ಗಟ್ಟಿ ಸ್ಥಾನವನ್ನು ಗಳಿಸಿದವರಲ್ಲಿ ಶಿವರುದ್ರಪ್ಪ ಮೊದಲಿಗರು. ಶಿವರುದ್ರಪ್ಪನವರ ಪ್ರಾರಂಭದ ವಿಮರ್ಶೆಗಳಲ್ಲಿ ಕುವೆಂಪು ಅವರ ಪ್ರಭಾವವನ್ನು ಗುರುತಿಸಬಹುದು. ಆದರೆ ಕುವೆಂಪು ಹಾಕಿಕೊಟ್ಟ ಸಿದ್ಧಾಂತಗಳ ಮಾರ್ಗದಲ್ಲಿ ಶಿವರುದ್ರಪ್ಪ ಬಹಳ ದೂರ ನಡೆದಿದ್ದಾರೆ ಎಂಬುದಕ್ಕೆ ಅವರ ಇತ್ತೀಚಿನ ವಿಮರ್ಶೆಯೂ ಉತ್ತಮ ನಿದರ್ಶನ. ಕುವೆಂಪು ಅವರ 'ಪಕ್ಷಿಕಾಶಿ'ಯನ್ನು ವಿಮರ್ಶೆ ಮಾಡುತ್ತಾ ತಾಳಿರುವ ಪಕ್ಷಪಾತ ರಹಿತ ನಿಲುವು ಮೆಚ್ಚುವಂಥದು. ಕುವೆಂಪು ಸಾಹಿತ್ಯ ವಿಮರ್ಶೆ ಮತ್ತು ಮೀಮಾಂಸೆಗಳಿಗೆ ಕೊಟ್ಟು ಕೊಡುಗೆಯನ್ನು ಬೆಳೆಸುವುದರ ಜೊತೆಯಲ್ಲಿ ತಮ್ಮತನವನ್ನೂ ಉಳಿಸಿಕೊಂಡು ಶಿವರುದ್ರಪ್ಪನವರು ಕನ್ನಡದ ಪ್ರಮುಖ ವಿಮರ್ಶಕರು. ಶಿವರುದ್ರಪ್ಪನವರ ಹಾಗೆ ಅವರ ಇನ್ನುಳಿದ ಶಿಷ್ಯರು ಬರೆಯಲಾಗಲಿಲ್ಲ, ಬೆಳೆಯಲಾಗಲಿಲ್ಲ.

ಕುವೆಂಪು ಶಿಷ್ಯರೆಲ್ಲರ ಓದು ಆಗಾಧವಾದುದು-ಕೇವಲ ಸಾಹಿತ್ಯಕ್ಕೆ ಸೀಮಿತವಾಗದೆ ಸಮಾಜದ ಎಲ್ಲ ಮುಖಗಳ ಬಗ್ಗೆಯೂ ಸಾಕಷ್ಟು ಅಧ್ಯಯನ ಮಾಡಿದವರು. ಆದರೆ ಅದು ಎಲ್ಲಿಯೂ ಭಿನ್ನವಾಗಿ ವಿಶಿಷ್ಟವಾಗಿ ಮೂಡಿ ಬರಲಿಲ್ಲ. ಕುವೆಂಪು ಸಾಹಿತ್ಯವನ್ನು ವಿಮರ್ಶಿಸುವಾಗ ಅವರ ಶಿಷ್ಯರು ತಾಳುವ ನಿಲುವು ಹೇಗಿರುತ್ತದೆ ಎಂಬುದಕ್ಕೆ ಸಣ್ಣ ಉದಾಹರಣೆಯನ್ನು ಸುಜನಾ ಅವರ ಮಾತಿನಲ್ಲೇ ಹೇಳುವುದ ಸೂಕ್ತ. ಈ ಮಾತನ್ನು ನೇರವಾಗಿಯೇ ಅವರು ನನಗೇ ಹೇಳಿದ್ದು. ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಕೆಲವು ಸಾಲುಗಳು ಓದುತ್ತಿರುವಾಗ ಆ ನನ್ನ ಗುರುವಿನ ಪಾದಗಳಿಗೆ ಎರಗೋಣ ಅನ್ನಿಸುತ್ತದೆ; ಮತ್ತೆ ಕೆಲವು ಸಾಲುಗಳನ್ನು ಓದುತ್ತಿರುವಾಗ ತೀರಾ ಸಾಮಾನ್ಯ ಅನ್ನಿಸುತ್ತದೆ'. ಈ ಮಾತುಗಳನ್ನೇ ಏಕೆ ಉದಹರಿಸ ಬೇಕಾಯಿತೆಂದರೆ ಒಬ್ಬ ಕವಿಯನ್ನು ಅಧ್ಯಯನ ಮಾಡುವಾಗ ಇಂಥ ಮನಸ್ಸಿದ್ದರೆ ಏನಾಗಬಹುದು ಎಂಬುದರ ಕಡೆ ಗಮನ ಸೆಳೆಯಲು. ನಮ್ಮ ಹಿರಿಯ ತಲೆಮಾರಿನ ಲೇಖಕರಲ್ಲಿ ಸುಜನಾ ಹೆಚ್ಚು ಓದಿಕೊಂಡವರು; ತಿಳಿದವರು. ಕುವೆಂಪು, ಪು.ತಿ.ನ.ರ ಸಾಹಿತ್ಯದ ಬಗ್ಗೆ ಎಲ್ಲೆಂದರೆ ಎಲ್ಲಿ, ಹೇಗೆಂದರೆ ಹಾಗಿ ಅಧಿಕೃತ ಎನ್ನಿಸುವಷ್ಟರ ಮಟ್ಟಿಗೆ ಮಾತನಾಡಬಲ್ಲ ಶಕ್ತಿಯುಳ್ಳವರು. ಆದರೆ ಸುಜನಾ ಅವರಿಂದ ಹಿಡಿದು ಬಹಳ ಮಂದಿ ಅವರ ಶಿಷ್ಯರು ಕುವೆಂಪು ಸಾಹಿತ್ಯದ ಬಗ್ಗೆ ಕಟುವಾದ ಮಾತನ್ನು ಕೂಡ ಕೇಳಲಾರದ ಸ್ಥಿತಿಗೆ ತಲುಪಿದ್ದಾರೆ. ಅಷ್ಟರ ಮಟ್ಟಿಗೆ ಕುವೆಂಪುರವರನ್ನು ಆರಾಧಿಸುತ್ತಾರೆ.

ನವ್ಯ ಲೇಖಕರಲ್ಲಿ ಬಹುಪಾಲು ಜನರು ತಮ್ಮ ಮೊದಲ ಪದ್ಯ ರಚನೆಯ ಕ್ರಮವನ್ನು ಕುವೆಂಪು -ಬೇಂದ್ರ ಅವರಿಂದ ಕಲಿತದ್ದು ಎಂಬುದರಲ್ಲಿ ಸಂದೇಹವಿಲ್ಲ. ರಾಮಚಂದ್ರ ಶರ್ಮ, ಚಂಪಾ. ಚಂದ್ರಶೇಖರ ಕಂಬಾರ, ಲಂಕೇಶ, ಅಡಿಗರು, ಗೋಕಾಕ್ -ಮೊದಲಾದವರ ಪ್ರಾರಂಭದ ರಚನೆಗಳು ಇದನ್ನು ಸ್ಪಷ್ಟಡಿಸುತ್ತವೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ನವ್ಯ ಸಾಹಿತ್ಯ ಒಂದು ದ್ವೀಪವಿದ್ದ ಹಾಗೆ. ಅಷ್ಟರಮಟ್ಟಿಗೆ ಅದು ಪರಕೀಯ. ಈ ಪರಕೀಯತನ ಭಾಷೆಯದಲ್ಲ; ವಸ್ತುವಿನದು. ಕವಿ ಮನೋಧರ್ಮದ; ಈ ನಾಡು-ನುಡಿ ಮತ್ತು ಬದುಕಿನ ಬಗ್ಗೆ ಬೆಳೆಸಿಕೊಂಡ ಸಿನಿಕತನದಿಂದ ಮೂಡಿಬಂದದ್ದು. ಆದ್ದರಿಂದ ಕುವೆಂಪು ಅವರ ಪ್ರಭಾವದಿಂದ ದೂರನಿಂತ ಇಲ್ಲಿಯ ಬರಹಗಾರರಲ್ಲಿ ಕೆಲವರು ಅನಂತರದ ದಿನಗಳಲ್ಲಿ ನವ್ಯ ಪ್ರಕಾರದಿಂದ ದೂರ ಸಿಡಿಯಬೇಕಾಯಿತು. ಲಂಕೇಶ, ಕಂಬಾರ, ಚಂಪಾ ಮತ್ತು ತೇಜಸ್ವಿಯಂಥ ಬರಹಗಾರರು ನಿಧಾನ ವಾಗಿಯಾದರೂ ಕುವೆಂಪು ಅವರ ಗದ್ಯ ಸಾಹಿತ್ಯದಿಂದ ಪ್ರಭಾವಿತರಾದರು. ಸಾಹಿತ್ಯ ಜನಪರ ವಾಗಿರಬೇಕೆಂಬ ಧೋರಣೆಗೆ ಬದ್ಧರಾದ ಮೇಲೆ, ಜನಪರ ಧೋರಣೆಗೆ ಬೇರುಗಳು ಕುವೆಂಪು ಬೇಂದ್ರೆಯವರ ಕವನಗಳಲ್ಲಿ ಅದರಲ್ಲೂ ಕುವೆಂಪು ಕಾದಂಬರಿ ಮತ್ತು ವೈಚಾರಿಕ ಬರಹಗಳಲ್ಲಿ ಇರುವುದನ್ನು ಗುರ್ತಿಸಿಕೊಂಡರು.

ಸಾಹಿತ್ಯ ಮತ್ತು ಸಮಾಜ ಬೇರೆ ಬೇರೆ ಅಲ್ಲ. ಒಂದರ ಪ್ರತಿಬಿಂಬ ಒಂದು. ಒಂದನ್ನು ಬಿಟ್ಟು ಮತ್ತೊಂದಿಲ್ಲ ಎಂಬ ಸಾಮಾಜಿಕ ಅರಿವೂ ಸಾಹಿತಿಯಾದವನಲ್ಲಿರಬೇಕೆಂಬುದನ್ನು ನವ್ಯದ

ನಂತರದ ಲೇಖಕರು ಕುವೆಂಪು ಸಾಹಿತ್ಯದಿಂದ ಅರಿತರು. ಕವಿಯ ಆತ್ಮ ವಿಕಾಸ ಮಾತ್ರ ಸಾಹಿತ್ಯದ ಗುರಿಯಲ್ಲ. ಸಮಾಜ ಚಲನಶೀಲವಾಗಿರುವಂತೆ ನೋಡಿಕೊಳ್ಳಬೇಕಾದ್ದು, ಅ ಚಲನಶೀಲತೆ ಪ್ರಗತಿಶೀಲವಾಗಿರಬೇಕೆಂಬ ಧೋರಣೆ ಸಾಹಿತ್ಯದ್ದಾಗಿರಬೇಕಾಗುತ್ತದೆ ಎಂಬ ತತ್ವವನ್ನು ಕುವೆಂಪು ಸಾಹಿತ್ಯದಲ್ಲಿ ಅರಿತರು. ಹಾಗೆ ಆಗಬೇಕಾದರೆ ಸಾಹಿತ್ಯ ಸಮಾಜಕ್ಕೆ ಸಂವಹನ ಆಗಬೇಕು. ಕವಿಯ ಆಶಯ ಅದಾಗಬೇಕಾದರೆ ಅವನ ರಚನೆಯಲ್ಲಿ ಲಯ, ಗೇಯ ಮುಖ್ಯ. ಕುವೆಂಪು ಅವರ 'ಕ್ರಾಂತಿ ಕಹಳೆ', ಪದ್ಯಗಳೂ 'ಕಲ್ಕಿ' 'ಪ್ರೇತಕ್ಯೂ' ಮೊದಲಾದ ಕವನಗಳು ಮತ್ತು ಬೇಂದ್ರೆ ಅವರ 'ಕುರುಡು ಕಂಚಾಣ' 'ಅನ್ನಾವತಾರ' ಮೊದಲಾದ ಪದ್ಯಗಳು ಈ ನಿಟ್ಟಿನಲ್ಲಿ ಆಧುನಿಕ ಬರಹಗಾರರ, ಅದರಲ್ಲೂ ಬಂಡಾಯ-ದಲಿತ ಕಾವ್ಯದ ರೂಪ ಮತ್ತು ವಸ್ತುವಿಗೂ ಕುವೆಂಪು ಅವರ 'ಕ್ರಾಂತಿ **ಕಹಳೆ'** * ಪದ್ಯಗಳ ರೂಪ ಮತ್ತು ವಸ್ತುವಿನ ಆಶಯಕ್ಕೂ ಅಂತಹ ವ್ಯತ್ಯಾಸವಿಲ್ಲ. ಬಂಡಾಯಿ-ದಲಿತ ಲೇಖಕರ ಮೇಲೆ ನವ್ಯ ಸಾಹಿತ್ಯದ ಪ್ರಭಾವ ಇಲ್ಲವೆಂದೇ ಹೇಳಬೇಕು.

ಇಪ್ಪತ್ತನೇ ಶತಮಾನದ ಕೊನೆಯ ಭಾಗದಲ್ಲಿರುವ ಲೇಖಕರಿಗೆ ಆಧುನಿಕ ಕನ್ನಡ ಸಾಹಿತ್ಯ ಎರಡು ಪಂಥಗಳನ್ನು ದಾಟಿ ಮೂರನೆಯ ಮಜಲಿಗೆ ಹೊರಳುತ್ತಿರುವುದು ಕಾಣುತ್ತಿದೆ. ಇಂಥ ಸಂಕ್ರಮಣಾವಸ್ಥೆಯಲ್ಲಿ ನವೋದಯ ನವ್ಯದವರಿಗಿಲ್ಲದ, ಆಧುನಿಕ ಕನ್ನಡ ಸಾಹಿತ್ಯವನ್ನು ತೌಲನಿಕವಾಗಿ ಅಧ್ಯಯನ ಮಾಡುವ ಅವಕಾಶ ಬಂಡಾಯ ದಲಿತ ಲೇಖಕರಿಗೆ ಲಭಿಸಿದೆ. ಈ ಅವಕಾಶವನ್ನು ಸದುಪಯೋಗ ಪಡಿಸಿಕೊಂಡಾಗ ಕಾಣುವ ಅಂಶ: ನವ್ಯದವರಿಗಿಂತ ನವೋದಯದ ಬರಹಗಾರರು ಇತ್ತೀಚಿನ ಬರಹಗಾರರಿಗೆ ಆಶಯ, ಧೋರಣೆ ಮತ್ತು ಕಳಕಳಿಗೆ ಹತ್ತಿರವಾಗಿದ್ದಾರೆ; ಬದುಕು ಬರಹಗಳಲ್ಲಿ ಭಿನ್ನವಾಗಿಲ್ಲ ಎಂಬುದು ತಿಳಿದುಬರುತ್ತದೆ. ಈ ಅನಿಸಿಕೆಗೆ ಕುವೆಂಪು ಬದುಕು ಮತ್ತು ಸಾಹಿತ್ಯ ಉತ್ತಮ ಆಧಾರವಾಗಿ ನಿಲ್ಲುತ್ತದೆ.

ಇಂಥ ಸಂದರ್ಭದಲ್ಲೂ ಕುವೆಂಪು ಸಾಹಿತ್ಯವನ್ನು ಅವರ ಶಿಷ್ಯರಂತೆ ಅಭಿಮಾನ ಆರಾಧನಾ ಭಾವಗಳಿಂದ ನೋಡುತ್ತಿರುವವರಿಗೇನೂ ಕೊರತೆಯೇನಿಲ್ಲ. ಕುವೆಂಪು ಅವರ ಬಗ್ಗೆ ವಸ್ತುನಿಷ್ಠವಾಗಿ ಮಾಡಿದ ವಿಮರ್ಶೆಯೂ ಕೆಲವರಿಗೆ ಸಹಿಸಲಾಗದ ತುತ್ತಾಗುತ್ತದೆ. ಆರೋಗ್ಯ ಪೂರ್ಣವಾದ ವಿಮರ್ಶೆಯನ್ನು ಬಯಸುವ ವಿಮರ್ಶಕ ತಾನು ಮುಕ್ತ ಮನಸ್ಸಿನಿಂದ ಬರುವ ಟೀಕೆಗಳನ್ನೂ ಸ್ವೀಕರಿಸಬೇಕು. ಆಗ ಸಾಹಿತ್ಯ ಚರ್ಚೆಯಲ್ಲಿ ಹೊಸ ಆಯಾಮಗಳು ಮೂಡಲು ಸಾಧ್ಯವಾಗುತ್ತದೆ. ಕುವೆಂಪು ಸಾಹಿತ್ಯವನ್ನು ಗುತ್ತಿಗೆ ತೆಗೆದುಕೊಂಡವರಂತೆ ಕೆಲವು ಲೇಖಕರು ನಡೆದುಕೊಳ್ಳುತ್ತಿದ್ದಾರೆ. ಕುವೆಂಪು ಬಗೆಗಿನ ಅತೀವ ಭಕ್ತಿ ಕೆಲವು ವಿಮರ್ಶಕರಿಂದ ಕುವೆಂಪು ಆಶಯಕ್ಕಿಂತ ಭಿನ್ನವಾದ ಅರ್ಥ ಬರುವ ವಿಮರ್ಶೆಯನ್ನು ಮೂಡಿಸಿದೆ. ಇದಕ್ಕೆ ಒಂದು ಉದಾಹರಣೆಯನ್ನು ನೋಡಬಹುದು. ಒಬ್ಬ ವಿಮರ್ಶಕರು ಕುವೆಂಪು ಅವರ ಕಾದಂಬರಿಗಳನ್ನು ಕುರಿತು ಈ ತೀರ್ಮಾನಕ್ಕೆ ಬಂದಿದ್ದಾರೆ: 'ಕಾನೂನು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಪ್ರಗತಿಪರರಿಗೆ, ಶ್ರಮಜೀವಿಗಳಿಗೆ ಗೀತೆ ಬೈಬಲ್ ಖುರಾನ್‌ಗಳಾಗಿವೆ. ಈ ಮಾತನ್ನು ಬರೆದವರ ಕುವೆಂಪು

---

ಕ್ರಾಂತಿಕಹಳೆ : ಸಂಗ್ರಹ ಎನ್. ಬೋರಲಿಂಗಯ್ಯ

ಬಗೆಗಿನ ಪ್ರೀತಿ, ಸನಾತನ ಧರ್ಮಗಳ ಬಗೆಗಿನ ಅತೀವ ನಂಬಿಕೆ ಏನು ಬರೆಯುತ್ತಿದ್ದೇನೆಂಬ ಪ್ರಜ್ಞೆಯನ್ನು ಮರೆಸಿದೆ. ಇಡೀ ಕುವೆಂಪು ಸಾಹಿತ್ಯ 'ಗೀತೆ, ಖುರಾನ್, ಬೈಬಲ್'ಗಳು ತಮ್ಮ ಶೋಷಕತನದಿಂದ ಜಗತ್ತಿನ ಪ್ರಗತಿಪರರನ್ನೂ ಶ್ರಮಜೀವಿಗಳನ್ನೂ ತುಳಿದಿವೆಯೆಂಬುದನ್ನು ಸೂಚ್ಯವಾಗಿ ತಿಳಿಸುತ್ತದೆ. ಈ 'ಗೀತೆ ಬೈಬಲ್ ಖುರಾನ್'ಗಳು ಜಗತ್ತಿನ ಇತಿಹಾಸದಲ್ಲಿ ಪ್ರಗತಿಯನ್ನು ಎಲ್ಲ ಸ್ತರಗಳಲ್ಲೂ ಹತ್ತಿಕ್ಕುವವರ ಆಧಾರ ಗ್ರಂಥಗಳಾಗಿದ್ದವೆಂಬುದನ್ನೂ ಶ್ರಮ ಜೀವಿಗಳಿಗೆ ಸಾಮಾಜಿಕ ನ್ಯಾಯ ದೊರಕಿಸಿಕೊಡದಂತೆ ನೋಡಿಕೊಂಡವೆಂಬುದನ್ನೂ ಮರೆಯುವಂತಿಲ್ಲ. ಈ ಸಾಮಾನ್ಯ ತಿಳಿವೂ ಇಲ್ಲದ ಲೇಖಕರು ಕುವೆಂಪು ಕಾದಂಬರಿಗಳನ್ನೂ 'ಗೀತೆ ಬೈಬಲ್ ಖುರಾನ್'ಗಳಿಗೆ ಹೋಲಿಸಿ, ಕುವೆಂಪು ಆಶಯಕ್ಕೆ ಮಸಿ ಬಳಿಯುವ ಕೆಲಸ ಮಾಡಿದ್ದಾರೆ.

ಕುವೆಂಪು ಆಧುನಿಕ ಕನ್ನಡ ಸಾರಸ್ವತ ಲೋಕದ ವಿಸ್ಮಯ ಕಲಾವಿದ. ಇವರ ಪ್ರಭಾವ ಹೊಸ ಹೊಸ ಆಶಯಗಳನ್ನೂ ದಿಗಂತಗಳನ್ನೂ ತೆರೆದಿಡುತ್ತದೆ. ಕುವೆಂಪು ಸಾಹಿತ್ಯ ತೆರೆದಿಡುವ ಈ ಹೊಸ ಆಶಯ ಮತ್ತು ದಿಗಂತಗಳಿಂದ ಆಧುನಿಕ ಬರಹಗಾರ ಬೆಳೆಯಬೇಕಾದ್ದು, ನಡೆಯಬೇಕಾದ್ದು ಬಹಳಷ್ಟಿದೆ.



# ಜಲಗಾರ ಮತ್ತು ಸಾಮಾಜಿಕ ಪ್ರಜ್ಞೆ

ಮೊದಲ ಓದಿಗೆ 'ಜಲಗಾರ ನಾಟಕ ಮೆಚ್ಚುಗೆಯಾಗುವುದು, ಅದು ತನ್ನಲ್ಲಿ ಗರ್ಭೀಕರಿಸಿಕೊಂಡಿರುವ ಸಾಮಾಜಿಕ ಪ್ರಜ್ಞೆಯಿಂದ;ಜೀವನವನ್ನು ಪೂರ್ಣದೃಷ್ಟಿಯಿಂದ ನೋಡಿದಾಗ ಮಾತ್ರ, ಅದರ ಸಾರ್ಥಕ್ಯಸಾಧ್ಯ ಎಂಬ ತತ್ವಪ್ರತಿಪಾದನೆಯಿಂದ ; ಸಮಾಜದ ವಿವಿಧ ಸ್ತರಗಳ ಡಾಂಭಿಕತೆಯನ್ನು ಹರಿತವಾಗಿ, ವಸ್ತುವಿಷ್ಟವಾಗಿ ವಿಡಂಬಿಸುವುದರಿಂದ; ವ್ಯಕ್ತಿ ಹುಟ್ಟಿನಿಂದ, ಆತ ಯಾರೇ ಆಗಿರಲಿ ಆತನೂ ಪರಿಪೂರ್ಣನಾಗಬಲ್ಲ, ದಾರ್ಶನಿಕತೆಯನ್ನು ಏರಬಲ್ಲ ಎಂಬ ಸಮನ್ವಯತಾಭಾವದಿಂದ;ಕಾಯಕದಿಂದ ದೈವಸಾಕ್ಷಾತ್ಕಾರ ಸಾಧ್ಯ ಎಂದು ಹೇಳಿ ದುಡಿಮೆಯ ಮಹತ್ವದ ಕಡೆ ಓದುಗನ ಗಮನ ಹರಿಸುವುದರಿಂದ. ಅಂದ ಮೇಲೆ ಕುವೆಂಪು ಅವರು ರಚಿಸಿರುವ ಉತ್ತಮ ನಾಟಕಗಳಲ್ಲಿ ಇದೂ ಒಂದು ಎಂದು ಹೇಳುತ್ತಿಲ್ಲ. ಉತ್ತಮೋತ್ತಮ ಕೃತಿಗಳನ್ನಿತ್ತ ಚೇತನದ ಬೆಳವಣಿಗೆಯಲ್ಲಿ ಬಂದ ಒಂದು ವಿಶಿಷ್ಟ ಕೃತಿ ಎಂದು ಹೇಳಲು ಅಡ್ಡಿ ಇಲ್ಲ.

'ಜಲಗಾರ'ದ ಬಗ್ಗೆ ಹಲವಾರು ಆಕ್ಷೇಪಗಳನ್ನೆತ್ತಲು ಅವಕಾಶವಿದೆ. ಅವುಗಳಲ್ಲಿ ಕೆಲವು: ೧ ಇಲ್ಲಿ ವ್ಯಕ್ತಿಯ ಸಾಧನೆ ಕೇವಲ ಆದರ್ಶದ ಮಟ್ಟದಲ್ಲಿ ಮಾತ್ರ ನಿಲ್ಲುತ್ತದೆ; ಅದು ಕೃತಿಯಲ್ಲಿ ಪೂರ್ಣಗೊಂಡಂತೆ ಕಂಡು ಬಂದರೂ ವ್ಯಕ್ತಿ ಸಾಧಕನಾಗುವ ಹಂತ ಹಂತಗಳು ಇಲ್ಲಿ ಕಂಡು ಬರುವುದಿಲ್ಲ. ೨. ಜಲಗಾರ ಕೃತಿಯ ಪ್ರಾರಂಭದಲ್ಲೇ ಪರಿಪೂರ್ಣ ಭಾವದಿಂದಿದ್ದಾನೆ; ಆತ ಮುಂದೆ ಸಾಧಿಸುವ ಅಂತ್ಯಕ್ಕೆ ಪರಿಣಾಮವನ್ನುಂಟುಮಾಡುವ ಕ್ರಿಯೆಗಳು ಕೃತಿಯಲ್ಲಿ ಮೂಡುವುದಿಲ್ಲ. ೩. 'ಜಲಗಾರ ಹೊಸ ತತ್ವವನ್ನೇನು ಹೇಳುವುದಿಲ್ಲ, ಗೀತಾವಾಕ್ಯವನ್ನೇ ಮತ್ತೆ ಬಿಗಿಯಾಗಿ ಪ್ರತಿಪಾದಿಸುತ್ತದೆ; ಎಲ್ಲವೂ ಇಲ್ಲಿ ಆದರ್ಶವಾಗಿಯೇ ಕಂಡು ಬರುತ್ತವೆ. ೪. ಸಾಮಾನ್ಯ ವರ್ಗದ ವ್ಯಕ್ತಿಯೊಬ್ಬ ಕ್ರಿಯೆಯ ಮೂಲಕ ದೊಡ್ಡವನಾಗದೆ, ಕೇವಲ ಕೃತಿಕಾರರ ಕನಸುವಿಕೆಯ ಮೂಲಕ ಪೂರ್ಣನಾಗುತ್ತಾನೆ. ಇತ್ಯಾದಿ ......

ಮೇಲಿನ ಪ್ರಶ್ನೆಗಳೆಲ್ಲ ಅರ್ಥವಿಲ್ಲದವು ಎಂದು ಹೇಳಲಾರೆ. ಆದರೆ ಈ ಪ್ರಶ್ನೆಗಳನ್ನು ಕೇಳುವಾಗ ವಿಮರ್ಶಕ ನೆನಪಿಡಲೇಬೇಕಾದ ಸಂಗತಿಯೊಂದಿರುತ್ತದೆ. ಅದು ಕುವೆಂಪು ಅವರು ಕೃತಿ ಸೃಷ್ಟಿಸಿದ ಸಂದರ್ಭ. ಅವರು ನಂಬಿರುವ ತತ್ವ ಮತೀಯವಲ್ಲದ ಅಧ್ಯಾತ್ಮ. ಕುವೆಂಪು ಭಾರತೀಯ ಸಂಸ್ಕೃತಿಯನ್ನು ಎಲ್ಲರಂತೆ 'ವೈದಿಕ ಸಂಸ್ಕೃತಿ' ಎಂದು ಕರೆಯುವುದಿಲ್ಲ. ಅದರಲ್ಲಿ ಅವೈದಿಕ ಸಂಸ್ಕೃತಿಯ ಪಾತ್ರವೂ ತೀರ ಮುಖ್ಯ ಎಂಬುದನ್ನು ಅವರು ನಂಬಿದವರು ಮತ್ತು

( ಕ್ರಾಂತಿ ಕಹಳೆ : ಸಂಗ್ರಹ. ಎನ್. ಬೋರಲಿಂಗಯ್ಯ, ಮೊ. ಮು. ೧೯೭೭)

ಪ್ರತಿಪಾದಿಸಿದವರು. ವೈದಿಕ ಅವೈದಿಕ ಮೂಲತಃ ಎರಡೂ ಒಂದೇ, ಬೇರೆ ಬೇರೆ ಅಲ್ಲ. ವೈದಿಕಕ್ಕೆ ಬೆಳವಣಿಗೆಯ ಅವಕಾಶ ಮತ್ತು ಪ್ರೋತ್ಸಾಹ ದೊರೆಯಿತು. ಅವೈಧಿಕಕ್ಕೆ ಅದು ಹೋಗಿ ಕನಸಾಯಿತು. ಅವೈದಿಕಕ್ಕೂ ಅವಕಾಶ ದೊರೆತರೆ, ಅದು ವೈದಿಕಕ್ಕಿಂತ ಮಿಗಿಲಾಗಿ ಬೆಳವಣಿಗೆ ಹೊಂದುತ್ತದೆ ಎಂದು ಅವರು ತಿಳಿದವರು. ಮತೀಯತೆಯಲ್ಲಿ ನಂಬಿಕೆ ಕಳೆದುಕೊಂಡು ಕುವೆಂಪು ಅವರು ತಮ್ಮ ಜೀವನದುದ್ದಕ್ಕೂ ವೈದಿಕತೆಯನ್ನು ಸವಾಲಾಗಿ ತೆಗೆದುಕೊಂಡರು. ವೈದಿಕತೆಯ ಎಲ್ಲ ಸವಲತ್ತು ಗಳನ್ನು ದಕ್ಕಿಸಿಕೊಂಡ ಕುವೆಂಪು ಅವರು, ಅದು ಸಾಧಿಸದ್ದನ್ನು ಕೂಡ ಸಾಧಿಸಿದರು. ವೈದಿಕತೆಯ ಹೆಸರಿನಲ್ಲಿ ಸಮಾಜವನ್ನು ಕಬಳಿಸುತ್ತಿದ್ದ ಕುಶಕ್ತಿಯನ್ನು ಹೊಸ ಜಗತ್ತಿಗೆ ಪರಿಚಯಿಸಿದರು. ಅವೈಧಿಕ ಜನಾಂಗದ ಪ್ರತಿನಿಧಿಯಾಗಿ ತಮ್ಮ ಸಾಹಿತ್ಯ ಸೃಷ್ಟಿ ಮಾಡಿದರು. ಈ ಹಿನ್ನೆಲೆಯಲ್ಲಿ ನೋಡಿದಾಗ ಜಲಗಾರ ವೈದಿಕ ಸಾಧಿಸದ್ದನ್ನು ಸಾಧಿಸುವುದು, ಗಿಟ್ಟಿಸಿಕೊಂಡಿರುವುದು ತುಂಬ ಅರ್ಥಪೂರ್ಣವಾಗಿ ಕಂಡುಬರುತ್ತದೆ.

ಜಲಗಾರ, ನಾಟಕದಲ್ಲಿ ಬರುವ ಒಂದು ಮುಖ್ಯ ಪಾತ್ರದಂತೆ ಕಂಡು ಬಂದರೂ, ಅದು ಒಂದು ವರ್ಗದ ಪ್ರತಿಮೆಯಾಗಿ ನಿಲ್ಲುತ್ತದೆ. ಶೋಷಿತ ವರ್ಗದಿಂದ ಆತ ಬಂದವನಾದ್ದರಿಂದ, ಶೋಷಣೆ ಮಾಡುವವರ ಎಲ್ಲ ಗುಟ್ಟನ್ನು ತಿಳಿದವನು. ಧರ್ಮದ ಹೆಸರಿನಲ್ಲಿ ಇಡೀ ಸಮಾಜವನ್ನು ಕಬಳಿಸುವ ಕುಶಕ್ತಿಗಳ ಹೊಸ ಪರಿಚಯಕ್ಕೆ ಈತ ಸಾಣೆಕಲ್ಲು. ಈತ ನಾಟಕದಲ್ಲಿ ಒಂದು ಕೇಂದ್ರ ಬಿಂದು. ಅದರ ಸುತ್ತ ಎಲ್ಲಾ ಪಾತ್ರಗಳೂ, ದೃಶ್ಯಗಳೂ ಸುತ್ತುತ್ತವೆ. ಪ್ರತಿಯೊಂದು ಪಾತ್ರವೂ ಜಲಗಾರನ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ತನ್ನತನವನ್ನು ಅದು ಹೇಗೆ ಇರಲಿ, ಅದರ ನಿಜವಾದ ತನ-ಕಂಡುಕೊಂಡು ಬಯಲಾಗುತ್ತದೆ . ಜಲಗಾರ ಇಡೀ ಶೋಷಿತವರ್ಗ ಎಚ್ಚೆತ್ತಿರುವ ಪ್ರತಿಮೆ. ಆತ ಅಂತ್ಯದಲ್ಲಿ ವೈದಿಕರ ಬಣ್ಣವನ್ನು ಶಿವನಿಂದ ಬಯಲುಮಾಡಿಸಿ, ಅವರ ಎಲ್ಲಾ ಸವಲತ್ತು ಗಳನ್ನೂ ಪಡೆದುಕೊಳ್ಳುವುದು ಪ್ರಾಮಾಣಿಕತೆಯ ಜಯವಾಗುತ್ತದೆ.

ನಾಟಕದಲ್ಲಿ ಕ್ರಿಯೆ ತೀರಾ ಕಡಿಮೆ. ಎರಡು ದೃಶ್ಯಗಳಲ್ಲಿ, ಮೂವತ್ನಾಲ್ಕು ಪುಟಗಳಲ್ಲಿ ನಾಟಕ ಬಿಚ್ಚಿಕೊಳ್ಳುತ್ತದೆ. ನಾಟಕದ ಎರಡೂ ದೃಶ್ಯಗಳ ಆದಿಯಲ್ಲಿ ಭೂದೇವಿ ಬರುವುದು ತುಂಬಾ ಅರ್ಥಪೂರ್ಣ. ಆಕೆ ಪರಿಪೂರ್ಣಶಕ್ತಿಯ ಸಂಕೇತವಾಗುತ್ತಾಳೆ. ಬೆಳಗು ಸಂಜೆ ಜೀವನದ ಎರಡು ಅನಿವಾರ್ಯ ಅಂಗಗಳೆಂದೂ, ಎರಡರಲ್ಲೂ ಸೃಷ್ಟಿಯ ಚೇತನ ತುಂಬಿದೆ ಎಂದು ಧ್ವನಿತವಾಗುತ್ತದೆ. ಬದುಕು ಮತ್ತು ಈ ಪ್ರಕೃತಿಯ ತರತಮ ಬೆಸುಗೆ ಬದುಕಿನ ಗತಿಯನ್ನು ಸುಸ್ಥಿರವಾದ ಗುರಿಯೆಡೆಗೆ ಸಾಗಿಸುವ ಸಾಧನವಾಗುತ್ತದೆ. ಎಲ್ಲ ಪಾತ್ರಗಳು ಬಂದು ಹೋದರೂ ಜಲಗಾರ ತನ್ನ ಕಾಯಕದಲ್ಲಿ ನಿರತನಾಗಿ, ಅದರ ಫಲದಲ್ಲಿ ನಿರ್ಲಿಪ್ತನಾಗಿರುವಂತೆ, ಈ ಜಗದ ಎಲ್ಲ ಕಾರ್ಪಣ್ಯ ದುಃಖಗಳ ಅರಿವಿದ್ದೂ ಭೂದೇವಿ ನಿರ್ಲಿಪ್ತಳಾಗಿ ಬೆಳಗು ಸಂಜೆಗಳನ್ನು ಸ್ವಾಗತಿಸುತ್ತಾಳೆ. ಜೀವನದಲ್ಲಿ ಡಾಂಬಿಕತೆ, ಶೋಷಣೆಗಳು ಸಹಜ ಕ್ರಿಯೆಗಳು. ಲೌಕಿಕದಲ್ಲಿದ್ದೂ ಏನೇ ಬದಲಾವಣೆಯಾದರೂ ಚಿರನೂತನವಾದ ಪ್ರಕೃತಿ ಸದಾ ಚೇತನದಾಯಕವಾಗಿರುತ್ತದೆ ಎಂಬ ತತ್ತ್ವ ಇಲ್ಲಿ ಎದ್ದು ಕಾಣುತ್ತದೆ.

ಜಲಗಾರನಾಡುವ "ಬಿಜ್ಜೆಯೇಂ ತೋರ್ಕುಮೇ ಎದೆಯರಿವು ತೋರದಾ ಪರಮನಂ" ಎಂಬ ಮಾತು, ಜಲಗಾರನ ಚೇತನ ಪ್ರಾರಂಭದಲ್ಲೇ ಸಾಧನೆಯಲ್ಲಿ ಪಳಗಿರುವುದನ್ನು ಹೇಳುತ್ತದೆ. ಮುಂದೆ ಬರುವ ರೈತ ಇಬ್ಬಗೆಯ ವ್ಯಕ್ತಿತ್ವಕ್ಕೆ ಸಂಕೇತವಾಗುತ್ತಾನೆ. ಆತನಿಗೆ ತನ್ನ ಕರ್ಮದ ಸಂಪೂರ್ಣ ಅರಿವಿದೆ: "ನೇಗಿಲ ಗೆರೆಯೇ ತೋರುವುದೆನಗೆ ಮುಕ್ತಿಯ ಹಾದಿಯನು;ವೇದಗಳೆಲ್ಲಾ ನೆಗೆನೆಗೆದರಿಯದ ಅಂತ್ಯದ ಆದಿಯನು. ನನ್ನಿಯನರಿಯುವೆ ಕರ್ಮದಲ್ಲಿ." ಆದರೆ ಆತನಲ್ಲಿರುವ ದ್ವಿಮುಖ ವ್ಯಕ್ತಿತ್ವದಿಂದ ಶಿವನನ್ನು ಗುಡಿಯಲ್ಲಿ ಕಾಣಲು ಹೋಗುತ್ತಾನೆ. ಇಲ್ಲಿ ನಾಟಕಕಾರರು ರೈತನನ್ನು ವೈದಿಕತೆಗೆ ಮರುಳಾಗಿರುವ ಅವೈದಿಕತೆಗೆ ಸಂಕೇತವಾಗಿ ತರುತ್ತಾರೆ. ಮೂಲತಃ ರೈತ ಮತ್ತು ಜಲಗಾರರಲ್ಲಿ ಭೇದವಿಲ್ಲದಿದ್ದರೂ ವೈದಿಕತೆಯ ಪ್ರಭಾವದಿಂದ ತಪ್ಪಿಸಿಕೊಳ್ಳುವುದರಲ್ಲಿ ಇಬ್ಬರೂ ಭಿನ್ನರಾಗುತ್ತಾರೆ.

ಬ್ರಾಹ್ಮಣವರ್ಗದ ವರ್ಣಭೇದಕ್ಕೆ ಅಸ್ಪೃಶ್ಯಭಾವಕ್ಕೆ ಅವರ ಟೊಳ್ಳುತನಕ್ಕೆ ಇಲ್ಲಿ ಬರುವ ಪಾರ್ವರು ಉದಾಹರಣೆಯಾಗುತ್ತಾರೆ. ಜಲಗಾರನು ಹಾಡುವ ಹಾಡನ್ನು ದೂರದಿಂದ ಕೇಳಿದಾಗ "ಯಾರೋ ದಿವ್ಯಾತ್ಮನಿರಬೇಕು. ಮಧುರತಮ ಗಾಯನವು ಅಮಲತಮ ಹೃದಯದಿಂದಲ್ಲದೆ, ಹೊರಹೊಮ್ಮಲರಿಯದು" ಎಂದು ಮಾತನಾಡಿಕೊಂಡಿದ್ದವರು, ಅದನ್ನು ಹಾಡಿದವನು ಕೀಳುಜಾತಿಯವನೆಂದು ತಿಳಿದಾಗ "ಸಂಗೀತವನೀತೇನು ಮನಮೋಹಿಪಂತೆ ಇರಲಿಲ್ಲ, ಗಾನದೇವಿಯು ಹೀನ ಜಲಗಾರನನ್ ಒಲಿಯುವಳೆ ?" ಎಂದು ತಿರಸ್ಕರಿಸುತ್ತಾರೆ. ಜಾತಿಗೆ ವರ್ಣಕ್ಕೆ ಬೆಲೆ ಕೊಡುತ್ತಿದ್ದ ಡಾಂಬಿಕ ಜನರ ಹೀನಬುದ್ಧಿಯ ಪೂರ್ಣ ಚಿತ್ರವನ್ನು ಇಲ್ಲಿ ತೋರಿಸುವುದರ ಜೊತೆಗೆ, ಸಾಮಾಜಿಕವಾಗಿ ಅವರೆಷ್ಟು ಅಪಾಯಕಾರಿ ಎಂಬುದನ್ನು ನಾಟಕ ಬಿಚ್ಚಿ ತೋರಿಸುತ್ತದೆ.

ನಾಟಕದಲ್ಲಿ ಯಾವುದೇ ಕತೆ ಇಲ್ಲ. ಇರುವುದೆಲ್ಲವೂ ಸಮಾಜದ ವಿವಿಧ ಮುಖಗಳು. ಆ ಮುಖಗಳೇ ಅವರವರ ಯೋಗ್ಯತೆಯ ಕತೆಯನ್ನು ಹೇಳುತ್ತವೆ. ಇಲ್ಲಿ ಬರುವ ಇಬ್ಬರು ತರುಣರು, ಭಟ್ಟ, ಯುವಕ, ಹುಡುಗಿ, ತಿರುಕ ಎಲ್ಲರೂ ಸಮಾಜದ ವಿವಿಧ ಮುಖಗಳ ದಟ್ಟ ಪರಿಚಯ ಮಾಡಿಕೊಡುತ್ತಾರೆ.

ದೇವರನ್ನು ತೋರಿಸಿ ಶೋಷಣೆ ಮಾಡುವ ಭಟ್ಟನಿಗಿಂತ, ದೇವರನ್ನೂ ಮತವನ್ನೂ ಬಾಯಿಯಲ್ಲಿ ಬಯ್ಯುವ ಬೂರ್ಜ್ವಾ ತರುಣರೇ ಹೆಚ್ಚು ಅಪಾಯಕಾರಿಗಳಾಗುತ್ತಾರೆ. ಈ ತರುಣರು ಸಮಾಜದ ಕರಾಳತೆಯ ಸಂಪೂರ್ಣ ಅರಿವಿರುವವರು. ಅದರ ಬಗ್ಗೆ ಬದಲಾಗಬೇಕೆಂಬ ಧೋರಣೆಯುಳ್ಳವರು ಆದರೆ ಇವರದು ಕೇವಲ ಬೌದ್ಧಿಕ ಕ್ರಿಯೆ "ಬಡಜನರ ಕಣ್ಣೆತ್ತಿನೋಡದಿಹ ಮರುಗದಿಹ ಹಾಳು ಪೂಜೆಯದೇಕೆ ? ಹಸಿದ ಜನಗಳಿಗೆ ಕೊಡರೊಂದು ಕಾಸ ತಣ್ಣಗಿಹ ಕಲ್ಲುಗಳ ಮೇಲೆ ಎಣ್ಣೆಯನು ಬೆಣ್ಣೆಯನು ಸುರಿಯುವರು" ಎಂಬ ಮಾತಿಗೂ, ಕಾಸು ಕೇಳಲು ಬಂದ ತಿರುಕನನ್ನು ಬಡಿಯಲುದ್ಯುಕ್ತರಾಗುವ ಇವರ ಕ್ರಿಯೆಗೂ ಇರುವ ಅಸಮಾನತೆ ಇಲ್ಲಿ ಗಮನಾರ್ಹವಾದುದು. ನಡೆನುಡಿಗಳಲ್ಲಿ ಸಾಮ್ಯವಿಲ್ಲದ ಇವರು ಸಾಮಾಜಿಕವಾಗಿ ಭಟ್ಟನಿಗಿಂತ ಅಪಾಯಕಾರಿ ಎಂಬುದನ್ನು

"ಶತ್ರುಗಳ ಕಾಟವಾದರು ಬೇಕು ನಮಗಾಗಿ ಮಿತ್ರರೆಂಬುವ ನೆವದಿ ಮರುಕ ತೋರುವ ಕೃತ್ರಿಮದ ಕಾಟಬೇಡ". ಭಟ್ಟನಾದರೂ ಬೈದೂ ಹೋದ. ಬಡ ಜನರಿಗಾಗಿ ಮರುಗುವ ಇವರು ಭಿಕ್ಷುಕನ ಕಣ್ಣೆರಿದು, ಒದ್ದು, ತೆರಳಿದರು ಎಂದು ಜಲಗಾರನ ಮಾತಿನಲ್ಲಿ ಹೇಳಿಸುತ್ತಾರೆ. ಭಟ್ಟ ಬಾಯಿಯಲ್ಲಿ "ತ್ವಮೇವ ಮಾತಾಚ" ಎಂದು ಹೇಳಿಕೊಂಡು, ತನ್ನ ಮಡಿಯ ಮರೆಯಲ್ಲಿ ತನ್ನತನವನ್ನು ಮರೆಮಾಡಿಕೊಂಡಿದ್ದರೆ, ಈ ತರುಣರು ನೇರವಾದ ಶೋಷಣೆಗೆ ಕಾರಣರಾಗುತ್ತಾರೆ. ಇಲ್ಲಿ ನಾಟಕಕಾರರ ಸಾಮಾಜಿಕ ಪ್ರಜ್ಞೆಯು ಕೃತಿ ಸೃಷ್ಟಿ ಸಂದರ್ಭದಲ್ಲಿ ಮಾತ್ರ ನಿಲ್ಲದೆ, ಇಂದಿಗೂ ಹೆಚ್ಚು ಹೆಚ್ಚು ಜೀವಂತವಾಗಿರುವುದು ಮುಖ್ಯವಾಗುತ್ತದೆ. ಇಂದು, ಸಾಮಾಜಿಕ ಬದಲಾವಣೆಯ ಬಗ್ಗೆ ಮಾತಾನಾಡುತ್ತಿರುವ ನಮ್ಮ ಬುದ್ಧಿ ಜೀವಿಗಳ ನಡೆನುಡಿಗಳ ಅಂತರವನ್ನು ಗಮನಿಸಿದಾಗ ಇದು ಸುವ್ಯಕ್ತವಾಗುತ್ತದೆ. ಈ ಭಾಗದಲ್ಲಿ "ಬಡವರಿಗೆ ಬಡವರಲ್ಲದೆ ಬೇರೆ ಗತಿಯಂಟೇ?" ಎಂಬ ವಾಸ್ತವ ಸತ್ಯದೊಂದಿಗೆ ನಾಟಕ ಹೆಚ್ಚು ಸಂಕೀರ್ಣವಾಗುತ್ತದೆ.

ಎರಡನೆಯ ದೃಶ್ಯದಲ್ಲಿ ಸಂಜೆಯಾಗಿರುತ್ತದೆ. ಶಿವನನ್ನು ಗುಡಿಯಲ್ಲಿ ನೋಡಲು ಹೋದವರೆಲ್ಲರೂ ಮರಳಿ ಬರುತ್ತಿದ್ದಾರೆ. ಜಲಗಾರ ತಾನು ಮಾಡಿದ ಕಾಯಕದಿಂದ ತೃಪ್ತಿ ಯಿಂದಿದ್ದಾನೆ. ಎಲ್ಲರೂ ತಂತಮ್ಮ ಕಾಯಕಗಳ ಅದು ಎಂಥದೇ ಇರಲಿ ಬಗ್ಗೆ ಮಾತನಾಡುತ್ತಾ ಬರುತ್ತಾರೆ. ಜೀವ ಜೀವಗಳ ಮಧ್ಯೆ ಇರುವ ಅಂತರ, ಹೊಟ್ಟೆಗಿಲ್ಲದ ನರಳುವ, ಶೋಷಿತವಾಗಿರುವ ಶೋಷಣೆ ಮಾಡುವ ಮುಖಗಳು ಇಲ್ಲಿ ತಮ್ಮನ್ನು ಪರಿಚಯಿಸಿಕೊಳ್ಳುತ್ತವೆ.

ಸಾಮಾನ್ಯ ಜನತೆ ಸರಿಯಾದ ತಿಳಿವಿಲ್ಲದೆ ಮಿಥ್ಯವನ್ನೇ ಸತ್ಯವೆಂದು ನಂಬಿ ಮೋಸಹೋಗುತ್ತಾರೆ, ಎಂಬುದು ಉತ್ಸವದಿಂದ ಹಿಂದಿರುಗುತ್ತಿರುವ ರೈತನಿಂದ ವ್ಯಕ್ತವಾಗುತ್ತದೆ "ಶಿವನ ಗುಡಿ ದೊಡ್ಡಗುಡಿ! ಏನು ಚಿತ್ರದ ಕೆಲಸ ವಿಗ್ರಹವು ಬಲು ಚಂದ! ಜೋಯಿಸರ ಮಡಿ ಪಂಚೆ ಜರತಾರಿಯಪ್ಪಾ" ಎಂಬಲ್ಲಿನ ಅವನ 'ಮರುಳಾಗುವಿಕೆ'ಯನ್ನೂ ನಾಟಕಕಾರರು ವಿಡಂಬಿಸಿದ್ದಾರೆ. ಕೇವಲ ಹೊರಕ್ಕೆ ಮಾತ್ರ ಮರುಳಾಗಿ, ಒಳಗಿನ ದನಿಗೆ ಬೆಲೆಕೊಡದ ಅಸಂಖ್ಯರನ್ನು ವಾಸ್ತವದ ಕಡೆ ತೋರಿಸುವ ಪ್ರಯತ್ನವಿದೆ.

ಹಳ್ಳಿಯ ಹುಡುಗಿಯ ಪಾತ್ರ ಈ ವ್ಯವಸ್ಥೆಯ ನಿಸ್ಸಹಾಯಕತೆಯ, ನಿರ್ಲಿಪ್ತತೆಯ. ನಿಷ್ಕ್ರಿಯತೆಯ ಸಂಕೇತವಾಗುತ್ತದೆ. ಆಕೆಯ ರೋದನದಲ್ಲಿ ಇಡೀ ವ್ಯವಸ್ಥೆಯ ಬಗ್ಗೆ ರೊಚ್ಚು, ತಿರಸ್ಕಾರಗಳಿವೆ, ಆಕೆಯ ಪ್ರಾಮಾಣಿಕತೆಯು ನಿಸ್ಸಹಾಯಕತೆಯ ರೂಪಧರಿಸುವುದು ಸಾಮಾಜಿಕವಾಗಿ ಮುಖ್ಯವಾಗುತ್ತದೆ. ಆಕೆಯ ಕಷ್ಟದಲ್ಲಿ ಕಾಯಬಾರದೆ ಕಾವನೆಂದಿಹಗೊಲ್ಲ" ಎಂದು ಕೇಳಿಕೊಳ್ಳುವುದು ಅವಳ ನಂಬಿಕೆಯ ದೃಷ್ಟಿಯಿಂದ, ಅವಳ ತಾಳ್ಮೆಯ ದೃಷ್ಟಿಯಿಂದ ಗಮನಾರ್ಹವಾದುದು. ಮೇಲಿನ ಮಾತಿನಲ್ಲಿ ಆಕೆಯಲ್ಲಿ ತಿರಸ್ಕಾರದ ಭಾವನೆ ಕಂಡು ಬಂದರೂ ಅದೇ ಸ್ಥಾಯಿಯಾಗಿ ಕೊನೆಯವರೆಗೂ ಉಳಿದುಕೊಳ್ಳುವುದಿಲ್ಲ. ದೇವರು ಕಾಪಾಡುವನೆಂಬ ಭರವಸೆ ಆಕೆಗಿದೆ. ಆತನಲ್ಲಿ ನಿಷ್ಠೆಯಿದೆ. ಇದು ಇಡೀ ವ್ಯವಸ್ಥೆ ಏನೇ ಕಷ್ಟ ಬಂದರೂ

ಸಹಿಸಿಕೊಳ್ಳುತ್ತದೆ, ದೇವರದಲ್ಲಿ ಭರವಸೆ ಇಡುತ್ತದೆ ಎಂಬ ನಾಟಕಕಾರರ ಸಾಮಾಜಿಕ ಪ್ರಜ್ಞೆಯ ಅಳವಾದ ಬೇರುಗಳ ಮಜಲುಗಳು ಹೊರಹೊಮ್ಮುತ್ತವೆ.

ದೇವಸ್ಥಾನದಿಂದ ಬರುತ್ತಿರುವ ಪಾರ್ವರು ಆಡುವ ಮಾತುಗಳು "............ಅಂತೂ ನಮಗೆಲ್ಲ ಶಿವಗುಡಿಯ ದೆಸೆಯಿಂದ ಹಿಟ್ಟು ಹೊಟ್ಟೆಗೆ ದುಡ್ಡು ಬಟ್ಟೆಗೆ-" ಇವು ಸಾಮಾಜಿಕವಾಗಿ ಅವರು ನಡೆಸುತ್ತಿದ್ದ ದಬ್ಬಾಳಿಕೆ, ಸುಲಿಗೆಯನ್ನು ದಟ್ಟೈಸುತ್ತದೆ. ಈ ವರ್ಗಕ್ಕೂ ತಮ್ಮ ಶೋಷಕತನದ ಅರಿವಿದೆ. ಆದರೆ ತಮ್ಮ 'ಜರತಾರಿ'ಗಳ ಮಧ್ಯೆ ಅದನ್ನು ಬಚ್ಚಿಟ್ಟು ಕೊಂಡಿದ್ದಾರೆ. ಶೋಷಣೆಯ ಒಂದು ವಾಸ್ತವ ಚಿತ್ರ ಇಲ್ಲಿದೆ.

ಕಬ್ಬಿಗನ ಹಾಡು ನಿರ್ಲಿಪ್ತತೆಯ ಧಾಟಿಯಲ್ಲಿದ್ದರೂ ಈ ಸಾಮಾಜಿಕ ವ್ಯವಸ್ಥೆ ಮುಂದೆ ಸರಿಹೋಗಬಹುದೆಂಬ ಆಶಾಭಾವನೆಯನ್ನು ವ್ಯಕ್ತಪಡಿಸುತ್ತದೆ. ಆದರದು ವಾಸ್ತವ್ಯದ ಬಗ್ಗೆ ಕ್ರಿಯೆಯ ಸೂಚನೆಯನ್ನು ಕೊಡದೆ ಆದರ್ಶದ ಕನಸುವಿಕೆಯಲ್ಲಿ ನಿಂತು ಬಿಡುತ್ತದೆ.ಏಕೆಂದರೆ ಅದರ ಧಾಟಿಯಲ್ಲಿ ಇಬ್ಬಗೆಯ ಧೋರಣೆಯಿದೆ. ಆತನ ನಿರ್ಲಿಪ್ತತೆ ಒಂದು ಕಡೆಯಾದರೆ, ಆತನ ಕನಸುವಿಕೆ ಮತ್ತೊಂದು ಕಡೆ ನಿಂತು ದ್ವಂದ್ವ ಎನಿಸುತ್ತದೆ. ಅದೇ ರೀತಿ, ಕರ್ಮ ಲೀಲೆಯು ಲೀಲೆ ಕರ್ಮವು ಎಂಬದೆಮ್ಮೆಯ ಧರ್ಮವು;.............'ಲಾಭನಷ್ಟಗಳೊಂದುವಿಲ್ಲವು' ಎಂಬುದೇ ವರಧರ್ಮವು' ಎಂಬ ಬಾಲಕರ ಮಾತುಗಳು ಕೂಡ ಮುಖ್ಯವಾಗುತ್ತವೆ. ಕಬ್ಬಿಗ ಮತ್ತು ಬಾಲಕರ ಹಾಡುಗಳು ಮುಂದೆ ಜಲಗಾರ ಮುಟ್ಟುವ ಗುರಿಗೆ ಪೂರಕವಾಗಿ ಬರುತ್ತದೆ. ಕಬ್ಬಿಗನ ಹಾಡುವಿಕೆಯಲ್ಲಿ-ಆತನಿಗೆ ಬೆಳೆದ ಪ್ರಜ್ಞೆ ಇರುವುದರಿಂದ ನಮಗೆ ಅತಿಶಯತೆ ಕಂಡು ಬರುವುದಿಲ್ಲ. ಆದರೆ ಬಾಲಕರು ಹೇಳುವ ಮಾತುಗಳು ಅವರ ವಯೋಮಿತಿ ಮೀರಿ ಬಂದಂತಿವೆ. ಇಲ್ಲಿ ನಾಟಕ ಕಾರರು ಪಾತ್ರಗಳ ಪರಿಪೋಷಣೆಯಲ್ಲಿ ಕೇಂದ್ರ ಪರಿಣಾಮದ ಕಡೆ ಅನುವಾಗುವಂತೆ ಎಚ್ಚರ ವಹಿಸುವುದರಿಂದ ಹೀಗಾಗುತ್ತದೆ.

ಪ್ರಾರಂಭದಲ್ಲೇ ಸಾಧಕನಂತೆ ಕಂಡು ಬರುವ ಕರ್ಮದ ನಿಷ್ಠೆಯಲ್ಲಿ ವಿಚಲಿತನಾಗದ ಜಲಗಾರನಿಗೆ ಮೆಚ್ಚಿ 'ಜಲಗಾರನ' ರೂಪಧರಿಸಿ ಶಿವ ಪ್ರತ್ಯಕ್ಷನಾಗುವನು. ಜಲಗಾರನಂಥ ನಿಷ್ಠನೂ ಕೂಡ ಶಿವನನ್ನ 'ಜಲಗಾರ' ರೂಪದಲ್ಲಿ ಸ್ವೀಕರಿಸಲು ಅನುಮಾನಿಸುವುದು, ವ್ಯಕ್ತಿಯ ಅಪರಿಪೂರ್ಣತೆ ಯನ್ನುಹೇಳುತ್ತದೆ. ಶಿವ ತಿಳಿ ಹೇಳಿದಾಗ ಜಲಗಾರನಿಗೆ ಪೂರ್ಣತ್ವ ಬರುತ್ತದೆ. ಶಿವನು ಪಂಡಿತರು. ಶಾಸ್ತ್ರಿಗಳು ದೇವರ ಹೆಸರಿನಲ್ಲಿ ಉಂಟು ಮಾಡಿರುವ ಅಂಧತೆಯನ್ನು ಹೇಳುತ್ತಾನೆ. ನಿಜವಾದ ಶಿವನಿರುವುದು ಗುಡಿಯಲ್ಲಲ್ಲ: ಬಡಜನರೆದೆಯಲ್ಲಿ ಎಂಬುದನ್ನು ಇಡೀ ನಾಟಕ ಧ್ವನಿಸುತ್ತದೆ. ಶಿವ ಮತ್ತು ಜಲಗಾರ ಬೇರೆ ಬೇರೆ ಅಲ್ಲ ಎಂಬುದು, ಜಲಗಾರ ತಿರುಕನ ಪರವಹಿಸುವಿಕೆ, ತನ್ನ ಕಾಯಕದಲ್ಲಿ ನಿರತನಾಗುವಿಕೆ. ರೈತನಿಗೆ ತಿಳಿಹೇಳುವಿಕೆಯಲ್ಲಿಯೂ ಮತ್ತು ಕೊನೆಯಲ್ಲಿ ಶಿವನು ಹೇಳುವ "ಬೀದಿ ಗುಡಿಸುವ ಬಡ ವನೆದೆಯಲ್ಲಿ ನಾನಿರುವೆ! ಉಳುತಿರುವ ಒಕ್ಕಲಿಗನೆದೆಯಲ್ಲಿ

ನಾನಿರುವೆ! ಎಲ್ಲಿ ಹೊಲೆಯನು ನನ್ನ ಕಾರ್ಯದಲ್ಲಿ ತೊಡಗಿಹನೊ ಅಲ್ಲಿ ನಾನವನ ಪಕ್ಕ ದೊಳಿರುವೆ. ಕುಂಟರನು, ಕುರುಡರನು, ದೀನರನು, ಅನಾಥರನು, ಕೈಹಿಡಿದು ಪೋರೆಯುತಿಹನೆಡೆಯಿರುವೆ"ಎಂಬ ಮಾತಿಗೂ ಇರುವ ಸಾಮ್ಯ ಮತ್ತು ಹೊಂದಾಣಿಕೆಯನ್ನು ಗಮನಿಸಿದಾಗ ತಿಳಿದುಬರುತ್ತದೆ. "ಊರ ತೋಟಿಯು ನೀನು;ಜಗದ ತೋಟಿಯು ನಾನು "ಈ ಬಾಂಧವ್ಯದಲ್ಲಿ ಕಂಡುಬರುವ ಸಮನ್ವಯತಾ ಮತ್ತು ಪರಿಪೂರ್ಣಭಾವ ಮುಖ್ಯವಾಗುತ್ತದೆ. ನಿಜವಾದ ಒಳಗಿನ ಶಿವನನ್ನು ಕಂಡುಕೊಂಡು ಶಿವನೇ ಆಗುತ್ತಾನೆ, ಜಲಗಾರ. ಕಾಯಕವೇ ದೇವರೆಂಬ ಸತ್ಯ ಬೆಳಕಿಗೆ ಬರುತ್ತದೆ.

ನಾಟಕದಲ್ಲಿ ತತ್ವ ಕೊನೆಯಲ್ಲಿ ತೀರಾ ಸರಳೀಕೃತಗೊಂಡಿದೆಯೆನಿಸಿದರೂ ಸಾಮಾನ್ಯ ವರ್ಗದವನೊಬ್ಬನು ಕೂಡ,. ಶಿವನನ್ನು ಸೇರಬಲ್ಲ;ಶಿವವಾಗಬಲ್ಲ ಎಂಬ ನಾಟಕಕಾರರ ನಂಬಿಕೆಗನುಗುಣವಾಗಿದೆ. ಈ ಆದರ್ಶ ಹೆಚ್ಚು ಸಂಕೀರ್ಣ ಸಮಸ್ಯೆಗಳನ್ನುಹೊಂದುವಂಥದು. ಅದು ಕೃತಿಯಲ್ಲಿ ಕ್ರಿಯಾತ್ಮಕವಾಗಿ ಸಾಧಿತವಾಗಲಾರದೆ ಸಾಕ್ಷಾತ್ಕಾರದ ಹೆಸರಿನಲ್ಲಿ ಸಾಧಿತವಾಗುತ್ತದೆ. ಆದರೆ ಇದು ನಾಟಕಕಾರರ ಜೀವನ ಶ್ರದ್ಧೆ ಮತ್ತು ಅವರಿಗಿರುವ ಕರ್ಮ ಸಿದ್ಧಾಂತದಲ್ಲಿನ ನಂಬಿಕೆಯ ಹಿನ್ನೆಲೆಯಲ್ಲಿ ನೋಡಿದಾಗ ಸರಿ ಎನಿಸುತ್ತದೆ. ಇಷ್ಟೆಲ್ಲಾ ಆದರೂ ಈ ನಾಟಕ ವಿಶಿಷ್ಟವಾಗುವುದು, ತನ್ನಲ್ಲಿನ ಸಾಮಾಜಿಕ ಪ್ರಜ್ಞೆಯಿಂದ.



# ವಿಶ್ವಮಾನವ ಮತ್ತು ಜಾತಿ ಮಾನವರು

ರಾಷ್ಟ್ರಕವಿ ಶ್ರೀ ಕುವೆಂಪು ಅವರು ಹುಟ್ಟಿದ ಡಿಸೆಂಬರ್ 29ನೇ ತಾರೀಖಿನ ದಿನವನ್ನು ಇನ್ನು ಮುಂದೆ ವಿಶ್ವಮಾನವ ದಿನವನ್ನಾಗಿ ಆಚರಿಸುವಂತೆ ರಾಜ್ಯ ಸರ್ಕಾರ ಘೋಷಿಸಿದೆ. ಇದು ಒಂದು ಸರ್ಕಾರ, ತನ್ನ ನಾಡು -ನುಡಿಗೆ ದುಡಿದ ಸಂಸ್ಕೃತಿ ನಿರ್ಮಾಪಕನಾದ ಸಾಹಿತಿಯೊಬ್ಬನಿಗೆ ನೀಡುತ್ತಿರುವ ಗೌರವ.

ಕುವೆಂಪು ಅತ್ಯಂತ ಸಂಕೀರ್ಣ ಅಭಿವ್ಯಕ್ತಿಯ ಕವಿ. ನಾವು ಸಂಕೀರ್ಣತೆಯನ್ನು ಅರಸುವುದು ಅವರ ಸಾಹಿತ್ಯರೂಪದಲ್ಲಲ್ಲ, ಅವರು ಸೃಷ್ಟಿಸಿರುವ ಸಾಹಿತ್ಯದ ವಸ್ತುವಿನಲ್ಲಿ. ಜನಸಮುದಾಯ ಮತ್ತು ಅವರ ತಿಳುವಳಿಕೆ ಸಾಮಾಜಿಕ ಅಂತಸ್ತಿನ ಬಗ್ಗೆ ಅರಿವಿದ್ದ ಕುವೆಂಪು ಅವರು, ಸಂವಹನ ಕ್ರಿಯೆಯ ದೃಷ್ಟಿಯಿಂದ ತಮ್ಮ ವಿಚಾರವನ್ನು ಕವನಗಳಲ್ಲಿ ಪ್ರಸ್ತುತ ಸಂಕೀರ್ಣ ಸಮಾಜದ ವಿವಿಧ ಮಜಲುಗಳನ್ನು ಅಭಿವ್ಯಕ್ತಿಸಿದ್ದಾರೆ.

ಅತ್ಯಂತ ಗಟ್ಟಿಯಾದ ಸಾಹಿತಿ ಮಾತ್ರ ಎಲ್ಲ ಕಾಲಕ್ಕೂ ನಿಲ್ಲುವಂಥ ಸಾಹಿತ್ಯ ಕೊಡಬಲ್ಲ. ಕುವೆಂಪು ಇಂಥ ಗಟ್ಟಿ ಲೇಖಕರು. ತಮಗೇ ವಿಶಿಷ್ಟವಾಗಿದ್ದ ಗ್ರಾಮೀಣ ಅನುಭವ,ಸಮುದಾಯ ಪ್ರಜ್ಞೆ ಮತ್ತು ಅನಂತರದಲ್ಲಿ ಸಂಪಾದಿಸಿದ ಶಿಷ್ಟ ಪ್ರಜ್ಞೆ - ಇವುಗಳಿಂದ ಆವರೆಗಿನ ಕನ್ನಡ ಸಾಹಿತ್ಯಕ್ಕಿಂತ ಭಿನ್ನ ಧ್ವನಿಗಳನ್ನು ತಮ್ಮ ಸಾಹಿತ್ಯದಲ್ಲಿಹೊರಡಿಸಲು ಸಾಧ್ಯವಾಯಿತು. ಇದರಿಂದ 'ಕುವೆಂಪು ಅವರು ದ್ವಂದ್ವಗಳಲ್ಲಿರುವಂತೆ ನಮಗೆ ತೋರುವುದು.ಒಂದುಕಡೆ ದೇವರು, ಆಚಾರ, ನಂಬಿಕೆ, ಜಾತಿ, ವರ್ಗ, ಮಠಾಧಿಪತಿಗಳು ಮುಂತಾದ ಸಾಮಾಜಿಕ ವೈಷಮ್ಯಗಳ, ಅನಿಷ್ಟಗಳ ವಿರುದ್ಧ ಬಂಡೆದ್ದಿರುವಂತೆ ಕಂಡರೆ. ಮತ್ತೊಂದೆಡೆ ಪುನರ್ಜನ್ಮ, ಆಧ್ಯಾತ್ಮದಂಥ ಅಮೂರ್ತ ಅಂಶಗಳ ಕಡೆ ಒಲ್ಲಿದಿರುವುದನ್ನು ಕಾಣುತ್ತೇವೆ. ಈ ದ್ವಂದ್ವತೆ ಮೇಲುನೋಟಕ್ಕೆ ಸರಳವಾಗಿ ಕಂಡರೂ, ಕುವೆಂಪು ಬದುಕಿನ ರೂಪು, ಬೆಳೆದ ಪರಿಸರ, ಎಲ್ಲದಕ್ಕಿಂತ ಮಿಗಿಲಾಗಿ ಆಗಿನ ಯುಗಧರ್ಮದ ಹಿನ್ನೆಲೆಯಿಂದ ಗಮನಿಸಿದಾಗ ಅತ್ಯಂತ ಸಂಕೀರ್ಣವಾಗಿ ತೋರುತ್ತದೆ. "ಸ್ವಾತಂತ್ರ್ಯ ಪೂರ್ವ ಭಾರತ ಕ್ರಮಣ ಯುಗ; ಮೌಲ್ಯಗಳ ಸಂಘರ್ಷ ಪ್ರತಿಯೊಬ್ಬ ಪ್ರಜ್ಞಾವಂತನಲ್ಲಿ ಹೆಡೆಯಾಡುತ್ತಿದ್ದ ಕಾಲ. ಸ್ವಾತಂತ್ರ್ಯದ ಕನಸು, ಅನಂತರ ಸಿಗುವ ರಾಮರಾಜ್ಯ ಕಲ್ಪನೆ" ಒಂದು ಕಡೆಯಾದರೆ, ಅಂದು ಭಾರತೀಯ ಸಮಾಜವನ್ನು ತಿಂದು ನೊಣೆಯುತ್ತಿದ್ದ ಬಡತನ, ಅದಕ್ಕೆ ಮೂಲಾಂಶಗಳಾದ ಸಾಮಾಜಿಕ ಸಾಂಸ್ಕೃತಿಕ ಕಾರಣಗಳು, ಮತ್ತೊಂದು ಕಡೆ ವ್ಯವಸ್ಥೆಯ ವಿರುದ್ಧ ಸಿಡಿಯುವಂತೆ ಮಾಡುತ್ತಿದ್ದವು. ರಾಮಕೃಷ್ಣ ಆಶ್ರಮ, ಆರ್ಯಸಮಾಜ, ಗಾಂಧೀತತ್ವ, - ಮುಂತಾದವು ಸಮಾಜ ಸುಧಾರಕ ಅಂಶಗಳ ಮೂಲಕ, ಭಾರತೀಯ ಸಾಮಜಿಕ ವ್ಯವಸ್ಥೆಯನ್ನು

ಪರಿವರ್ತನೆ ಮಾಡುವುದರ ಮೂಲಕ ಸಮಾನತೆಯನ್ನು ತರುವ ಪ್ರಯತ್ನ ಮಾಡುತ್ತಿದ್ದವೇ ಹೊರತು, ಇರುವ ವ್ಯವಸ್ಥೆಯನ್ನು ಮೂಲಭೂತವಾಗಿ ಬದಲಿಸಲು ಹೊರಟವಲ್ಲ. ಕುವೆಂಪು ಇಂಥ ಪರಿಸರದ ಪ್ರಭಾವದಲ್ಲಿ ಬೆಳೆದವರು. ಆದ್ದರಿಂದಲೆ ಆ ಯುಗದ ಎಲ್ಲ ದ್ವಂದ್ವಗಳನ್ನು ಸಂಕೀರ್ಣ ಗುಣಗಳನ್ನು ಕುವೆಂಪು ಸಾಹಿತ್ಯ ಒಟ್ಟಾರೆಯಾಗಿ ಅಭಿವ್ಯಕ್ತಿಸುತ್ತದೆ. ಸಾಮಾಜಿಕ ವಿಷಯಗಳಲ್ಲಿ ಅತ್ಯಂತ ಬಂಡಾಯಗಾರನಾಗಿ, ಆಧ್ಯಾತ್ಮ ವಿಷಯಗಳಲ್ಲಿ ಸುಧಾರಕ ಮನೋಧರ್ಮಿಯಾಗಿ ಕುವೆಂಪು ನಮಗಿಂದು ಕಾಣುವುದೇ ಈ ಕಾರಣದಿಂದಾಗಿಯೇ. ಹೀಗಾಗಿ ಕುವೆಂಪು ಸಾಹಿತ್ಯ ಒಂದು ಯುಗ ಧರ್ಮದ ಅಭಿವ್ಯಕ್ತಿ.

ಕುವೆಂಪು ಸಾಹಿತ್ಯವನ್ನು ಕನ್ನಡ ವಿಮರ್ಶಾಲೋಕ ಅಧ್ಯಯನ ಮಾಡಿರುವ ರೀತಿ ಎರಡು ಅತಿರೇಕದಲ್ಲಿ ನಿಲ್ಲುತ್ತದೆ. ಕುವೆಂಪು ಅವರ ಸಮಕಾಲೀನರು ಯಾರೂ ಕುವೆಂಪು ಸಾಹಿತ್ಯವನ್ನು ವಿಮರ್ಶೆ ಮಾಡುವ ಗೋಜಿಗೆ ಹೋಗಲಿಲ್ಲ. ಕೆಲವು ಮುನ್ನುಡಿಗಳಲ್ಲಿ ಪ್ರೋತ್ಸಾಹದಾಯಕ ಮಾತುಗಳನ್ನಾಡಿರುವುದನ್ನು ಬಿಟ್ಟರೆ, ಗಂಭೀರ ಚರ್ಚೆಗೆ ಅವಕಾಶ ಮಾಡಿಕೊಟ್ಟಿಲ್ಲ. ಅವರಿಗೆ ಸಾಧ್ಯವಾಗುತ್ತಿದ್ದುದ್ದು ಅಷ್ಟೆ. ಮೂಲತಃ ಅದು ನವೋದಯದ ಪ್ರೋತ್ಸಾಹದ ಕಾಲ.

ಕುವೆಂಪು ಸಾಹಿತ್ಯವನ್ನು ನೇರವಾಗಿ ಅಧ್ಯಯನ ಮಾಡಹೊರಟವರು ಮುಖ್ಯವಾಗಿ ಎರಡು ಗುಂಪು : (೧) ಕುವೆಂಪು ಶಿಷ್ಯವರ್ಗ (೨) ನವ್ಯ ಸಾಹಿತಿಗಳು.

ಕುವೆಂಪು ಶಿಷ್ಯವರ್ಗದಲ್ಲಿ ಡಾ.ಜಿ. ಎಸ್.ಶಿವರುದ್ರಪ್ಪ. ಡಾ. ಪ್ರಭುಶಂಕರ, ಡಾ. ದೇ.ಜ.ಗೌ., ಡಾ. ಸುಜನಾ ಮೊದಲಾದವರು ಸೇರುತ್ತಾರೆ. ಕುವೆಂಪು ಸಾಹಿತ್ಯ ಮತ್ತು ವ್ಯಕ್ತಿತ್ವಗಳಿಂದ ನೇರವಾಗಿ ಪ್ರಭಾವಿತಗೊಂಡವರಿವರು, ಕುವೆಂಪು ಅವರಿಗಿಂತ ಭಿನ್ನವಾದ ಅಲೋಚನೆಗಳನ್ನು ರೂಢಿಸಿ ಕೊಂಡತೆ ಕಾಣವುದೂ ಇಲ್ಲ. ಇವರು ಎಷ್ಟೇ ವಸ್ತುನಿಷ್ಠವಾಗಿರಲು ಪ್ರಯತ್ನಿಸಿದರೂ, ಗುರು ಸಂಬಂಧದಿಂದ ದೂರನಿಂತು ವಸ್ತುವಿನಿಷ್ಠವಾಗಿ ಮೌಲ್ಯಮಾಪನ ಮಾಡಲು ಶಕ್ತರಾಗಲಿಲ್ಲ. ಗುರುವಿನ ಬಗ್ಗೆ ಪೂರ್ವ ನಿರ್ಧರಿತ ಒಪ್ಪಿಗೆಯ ಮನೋಭಾವ ಮತ್ತು ಗೌರವಗಳು ಇವರ ವಿಮರ್ಶೆಯಲ್ಲಿ ಎದ್ದು ಕಾಣುತ್ತವೆ.

ನವ್ಯ ಸಾಹಿತಿಗಳು ನವೋದಯ ಸಾಹಿತ್ಯದ ಬಗ್ಗೆ ತಳೆದ ಧೋರಣೆ ಮತ್ತು ಸಾಹಿತ್ಯ ಸೃಷ್ಟಿಯ ಹಿಂದಿನ ಮನೋಧರ್ಮದಲ್ಲಿ ಬೆಳೆಸಿಕೊಂಡ ಪಾಶ್ಚಾತ್ಯ ಪ್ರಭಾವ, ಅನುಕರಣೆಯಿಂದಾಗಿ ಕುವೆಂಪು ಸಾಹಿತ್ಯವನ್ನು ಟೀಕೆ ಮಾಡಿದರು. ಕುವೆಂಪು ಸಾಹಿತ್ಯ ಕೂಡ ಪಾಶ್ಚಾತ್ಯ ಸಾಹಿತ್ಯ ಮತ್ತು ದರ್ಶನಗಳಿಂದ ಪ್ರಭಾವಿತಗೊಂಡಿದ್ದರೂ. ಅದನ್ನು ಅರಗಿಸಿಕೊಂಡು, ತನ್ನತನವನ್ನು ತೋರುವ ಈ ಮಣ್ಣಿನ ಸಾಹಿತ್ಯವೆಂಬುದು ಬಹಳ ಮಂದಿ ನವ್ಯ ವಿಮರ್ಶಕರಿಗೆ ಅರ್ಥವಾಗಲಿಲ್ಲ. ಕುವೆಂಪು ಸಾಹಿತ್ಯ ಸೃಷ್ಟಿಯ ಹಿಂದೆ ಕೆಲಸಮಾಡಿರುವ ಅಂಶಗಳನ್ನು ಹುಡುಕುವುದರ ಮೂಲಕ ಅದರ ಇತಿಮಿತಿಗಳ ಮಧ್ಯೆಯೂ ಅದು ಬೆಳೆದದ್ದು ಹೇಗೆ ಎಂಬುದನ್ನು ಹುಡುಕುವ ಬದಲು ತಾವು

ಕಲಿತ ಪಾಶ್ಚಾತ್ಯ ಅಳತೆಗೋಲಿನಿಂದ ಅಳೆಯಲು ಹೊರಟು ತಮ್ಮ ವಿಶ್ಲೇಷಣೆಗಳಲ್ಲಿ ಸೋಲು ಕಂಡರು.

ನವೋದಯ ಮತ್ತು ನವ್ಯ ಎರಡೂ ಸಾಹಿತ್ಯ ಮಾರ್ಗಗಳು ಆಗಿ ಹೋಗಿರುವ ಈ ಕಾಲದಲ್ಲಿ ನಮ್ಮಂಥವರಿಗೆ ಜನಪರವಾದ ನಿಲುವುಗಳ ಬಗ್ಗೆ, ಸಮಾಜ ಪರಿವರ್ತನೆಯ ಬಗ್ಗೆ ಆಲೋಚನೆ ಮಾಡಿದಾಗ ನವ್ಯಕ್ಕಿಂತ ನವೋದಯ ಸಾಹಿತ್ಯ ಹೆಚ್ಚು ಪ್ರಿಯವಾಗುತ್ತದೆ. ಬದುಕು ಬರಹಗಳಲ್ಲಿ ಅಂತರ ಸೃಷ್ಟಿಸಿಕೊಂಡಿದ್ದ ನವ್ಯಸಾಹಿತ್ಯ ನಮ್ಮ ಮೇಲೆ ಪ್ರಭಾವ ಬೀರುವುದರಲ್ಲಿ ಸೋಲುತ್ತದೆ. ಸಾಹಿತ್ಯದ ರೂಪ, ಅಭಿವ್ಯಕ್ತಿ, ಲಯ, ಗೇಯತೆ - ಈ ಅಂಶಗಳಲ್ಲಿ ನಮಗೆ ನವೋದಯ ಸಾಹಿತ್ಯ ಆದರ್ಶವಾಗುತ್ತದೆ.

ಇತ್ತೀಚೆಗೆ ಸೃಷ್ಟಿಯಾಗುತ್ತಿರುವ ಬಂಡಾಯ ಮತ್ತು ದಲಿತ ಕಾವ್ಯವನ್ನು ಗಮನಿಸಿದಾಗ ಈ ಅಂಶ ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಹಿನ್ನೆಲೆಯಲ್ಲಿ ಕುವೆಂಪು ಸಾಹಿತ್ಯ ಹೆಚ್ಚು ಹೆಚ್ಚು ಅಧ್ಯಯನ ಯೋಗ್ಯವಾದದ್ದು, ಅರ್ಥ ಪೂರ್ಣವಾದದ್ದು.

ಒಂದು ಕಾಲಧರ್ಮದಲ್ಲಿ ಸೃಷ್ಟಿಗೊಂಡ ಸಾರ್ವಕಾಲಿಕ ಮೌಲ್ಯಗಳನ್ನು ತನ್ನಲ್ಲಿ ಒಳಗೊಂಡಾಗ ಮಾತ್ರ ಅದು ಎಲ್ಲ ಕಾಲಕ್ಕೂ ನಿಲ್ಲುವಂಥ ಸಾಹಿತ್ಯವಾಗುತ್ತದೆ. ಕುವೆಂಪು ನವೋದಯ ಕಾಲದಲ್ಲೇ, ಅವರ ಸಮಕಾಲೀನರಿಗೆ ಸವಾಲಾಗಿ ಕವಿ ನವ್ಯರಿಗೆ ಸವಾಲಾಗಿ ಬೆಳೆದ ಕವಿ; ಇಂದು ಕೂಡ ನಮಗೆ ಆದರ್ಶವಾಗಿರುವ ಕವಿ. ನಮ್ಮಂಥ ಯುವಕರು ಅವರ ಕೆಲವು ತತ್ವಗಳಲ್ಲಿ ಭಿನ್ನಾಭಿಪ್ರಾಯ ತಳೆದರೂ, ನವ್ಯರಿಗಿಂತ ಹೆಚ್ಚು ಪ್ರಸ್ತುತವಾಗುವ ಹಲವಾರು ಅಂಶಗಳನ್ನು ಅವರಲ್ಲಿ ಗುರುತಿಸುತ್ತೇವೆ.

ಕುವೆಂಪು ಸಾಹಿತ್ಯದ ಅಧ್ಯಯನ ಒಂದಲ್ಲ ಒಂದು ದಿನ ಸರಿಯಾದ ಬೆಲೆಕಟ್ಟಿಸಿಕೊಳ್ಳುತ್ತದೆ. ಅದು ಅಂಥ ಸಮಸ್ಯೆ ಅಲ್ಲ. ಆದರೆ ಇಂದು ಕುವೆಂಪು ಅವರನ್ನು ಜಾತ್ಯಾಂಧ ಜನರು ತೆಗೆದು ಕೊಳ್ಳುತ್ತಿರುವ ರೀತಿ ಅತ್ಯಂತ ಭೀತಿಹುಟ್ಟಿಸುವ ಅಂಶವಾಗಿದೆ. ಜಾತಿ, ಧರ್ಮ ವರ್ಗಗಳ ಬಗ್ಗೆ, ಪುರೋಹಿತಶಾಹಿ, ಮಠಾಧಿಪತಿಗಳ ಬಗ್ಗೆ ಸ್ಪಷ್ಟವಾಗಿ ವಿರೋಧ ಸೂಚಿಸಿದ ಕವಿ ಕುವೆಂಪು ;"ಸುಳ್ಳಿನಮಾಲೆಯ ಕೊರಳಿಗೆ ಸೊಡಿ, ಕಳ್ಳನೊಬ್ಬನನು ಗುರುವನು ಮಾಡಿ, ಬಡವರ ಹೊನ್ನನು ಕಾಣಿಕ ನೀಡಿ, ಧರ್ಮದ ಮರೆವರ ನೋಡಯ್ಯ" ಎಂದು ಮಠ ವ್ಯವಸ್ಥೆಯನ್ನು ವಿಡಂಬಿಸಿದರು. "ಗುಡಿ, ಚರ್ಚು ಮಸೀದಿಗಳನ್ನು ಬಿಟ್ಟು ಮನುಜಮತ ವಿಶ್ವಪಥ"ಕ್ಕೆ ಬರುವಂತೆ ನಾಡಿನ ಜನತೆಗೆ ಕರೆಕೊಟ್ಟರು. "ಹೋಗುತ್ತಿದೆ ಹಳೆ ಬಾಳು, ಹೊಸಬಾಳು ಬರುತಲಿದೆ"ಎಂದು ತರುಣರಿಗೆ ದೇಶ ಕಟ್ಟಲು ಕರೆಯಿತ್ತರು, ಅಂದಂತೆ ನಡೆದರು. ಮಠ ದೇವಸ್ಥಾನಗಳನ್ನು ಬಹಿಷ್ಕರಿಸಿದರು; ಜಾತಿಮತಗಳನ್ನು ತಿರಸ್ಕರಿಸಿದರು.

ಆದರೆ ದಕ್ಷಿಣ ಕರ್ನಾಟಕದ ಮೈಸೂರು, ಶಿವಮೊಗ್ಗ, ಬೆಂಗಳೂರು, ಚಿಕ್ಕಮಗಳೂರು, ಹಾಸನ, ಮಂಡ್ಯ ಜಿಲ್ಲೆಗಳ ಪ್ರಮುಖ ಜಾತಿಗಳಲ್ಲೊಂದಾದ ಒಕ್ಕಲಿಗರು ಕುವೆಂಪು ಅವರನ್ನು

ಈ ದಿನಗಳಲ್ಲಿ ಕಾಣುತ್ತಿರುವ ರೀತಿ ನಾಡಿನ ಭವಿಷ್ಯದ ಮತ್ತು ಕವಿಯ ತತ್ವದ ದೃಷ್ಟಿಯಿಂದ ಖಂಡಿತ ಆರೋಗ್ಯಕರವಲ್ಲ. ಕುವೆಂಪು ಜಾತಿ ಬಿಟ್ಟರೂ ಜಾತಿಯವರು ಕುವೆಂಪು ಅವರನ್ನು ಬಿಟ್ಟಂತೆ ಕಾಣುತ್ತಿಲ್ಲ. ಕುವೆಂಪು ಅವರನ್ನು ದೇವರೆಂಬಂತೆ ಹಾಡಿ ಹೊಗಳುವುದು ಸಾಲದೆಂದು ಅವರನ್ನು ಮಠದೊಳಕ್ಕೊ ಎಳೆಯುತ್ತಿರುವುದು ಕಂಡುಬರುತ್ತಿದೆ.

ಕುವೆಂಪು ಒಕ್ಕಲಿಗರ ಜಾತಿಯಲ್ಲಿ ಹುಟ್ಟಿದವರೆಂಬ ಒಂದೇ ಕಾರಣದಿಂದ ಅವರನ್ನು ಪ್ರೀತಿಸುವ ಮೆರೆಸುವ ಕಾರ್ಯ ನಡೆದಿದೆ. ಒಕ್ಕಲಿಗರು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು:ಇದರಿಂದ ಕುವೆಂಪು ಅವರಿಗೆ ಗೌರವ ಘನತೆಗಳು ಬರುವುದಿಲ್ಲ. ಅದರ ಬದಲಾಗಿ ಜೀವಂತವಾಗಿ ಕುವೆಂಪು ತತ್ವಗಳನ್ನು ಕೊಲೆಮಾಡಿದಂತಾಗುತ್ತದೆ. ಕಳೆದ ತಿಂಗಳು ಮಂಡ್ಯದಲ್ಲಿ ನಡೆದ ಕುವೆಂಪು ವಿಚಾರ ಸಂಕಿರಣವೊಂದರಲ್ಲಿ ಒಕ್ಕಲಿಗರ ಮಠದ ಜಗದ್ಗುರು ಭಾಗವಹಿಸಿದ್ದು, ಮುಂದೆ ಚುಂಚನಗಿರಿ ಕ್ಷೇತ್ರದ ಆಶ್ರಯದಲ್ಲಿ ಸ್ಥಾಪಿತವಾಗಿಲಿರುವ "ಕುವೆಂಪು ಜ್ಞಾನ-ವಿಜ್ಞಾನ ಕೇಂದ್ರ"ಕುವೆಂಪು ತತ್ವಗಳಿಗೆ ಬಗೆವ ದ್ರೋಹವೆಂಬುದನ್ನು ಒಕ್ಕಲಿಗರು ಅರ್ಥಮಾಡಿಕೊಳ್ಳಬೇಕು.

ಕುವೆಂಪು ಎಲ್ಲಕಡೆ ಜನತೆಗೆ "ವಿಶ್ವಮಾನವ"ರಾಗಲು ಕರೆ ಕೊಡುತ್ತಿದ್ದಾರೆ. ಒಕ್ಕಲಿಗರು "ವಿಶ್ವಮಾನವ"ನನ್ನು "ಜಾತಿಮಾನವ"ನನ್ನಾಗಿ ಮಾಡಲು ಯತ್ನಿಸುತ್ತಿದ್ದಾರೆ, ಕುವೆಂಪು ಸಾಹಿತ್ಯವನ್ನು ಕುರಿತ ಚರ್ಚೆ, ಅಧ್ಯಯನ, ವಿಚಾರಗೋಷ್ಠಿಗಳು ನಡೆಯಲಿ. ಅವನ್ನು ಯಾರೂ ತಪ್ಪೆನ್ನುವುದಿಲ್ಲ. ಒಂದು ನಾಡು ಒಬ್ಬ ಕಲಾಕಾರನಿಗೆ ನೀಡುವ ಗೌರವ ಇದೇ ರೀತಿ ಇರಬೇಕು. ಆದರೆ ಈ ತರದ ಗೌರವಗಳು ಜಾತಿ ಮೂಲದಿಂದ ಹುಟ್ಟಿರಬಾರದು. ಈಜಾತಿಯಲ್ಲಿ ಒಂದು ವೇಳೆ ಕುವೆಂಪು ಜನಿಸಿರದಿದ್ದಲ್ಲಿ ಕುವೆಂಪು ಅವರಿಗೆ ಇಂದು ದೊರೆಯುತ್ತಿರುವ ಗೌರವ ಸನ್ಮಾನಗಳು ನಡೆಯುತ್ತಿದ್ದವೆ? ಈ ಬಗ್ಗೆ ಒಕ್ಕಲಿಗರು ಆಲೋಚಿಸಬೇಕು ಮತ್ತು ತಮಗೆ ತಾವೇ ಪ್ರಶ್ನೆ ಹಾಕಿಕೊಳ್ಳಬೇಕು.

ಈ ರೀತಿಯ ಜಾತಿಸಂಬಂಧ ಅಧ್ಯಯನ ಸಭೆ-ಸಮಾರಂಭಗಳಿಂದ ಯಾವ ವ್ಯಕ್ತಿಯನ್ನೂ ದೊಡ್ಡದು ಮಾಡಲು ಸಾಧ್ಯವಿಲ್ಲ. ಬೇಕಾದರೆ ಸಣ್ಣದು ಮಾಡಬಹುದು. ಅನೇಕ ಜನ ಒಕ್ಕಲಿಗರು ತಮ್ಮ ಅಲ್ಪಮತಿಯಿಂದ ಈ ಕೆಲಸ ಮಾಡುತ್ತಿರಬಹುದು, ಇಂದು ಎಲ್ಲ ಒಕ್ಕಲಿಗರಿಗೂ ಆರಿಸಿಕೊಳ್ಳಲು ಎರಡು ಮಾರ್ಗಗಳಿವೆ:

೧. ಜಾತಿವ್ಯವಸ್ಥೆ : ಅದರ ಸಂಘಟನಾ ಕೇಂದ್ರವಾದ ಮಠ.

೨. ಕುವೆಂಪು ಸಾಹಿತ್ಯ

ಮೊದಲನೆಯದರಲ್ಲಿ ವ್ಯಕ್ತಿ ಕುಬ್ಜವಾಗುವ, ವ್ಯಕ್ತಿತ್ವ ಕುಟಿಲಗೊಳ್ಳುವ, ದೇಶ ಸಮಾಜಗಳ ವಿನಾಶಕಾರಿ ಶಕ್ತಿಯಾಗಿ ಬೆಳೆಯುವ ಸಾಧ್ಯತೆಗಳು ಮಾತ್ರ ಇವೆ. ಎರಡನೆಯದರಲ್ಲಿ ಜಾತಿಮತಗಳಿಂದ ದೂರವಾಗಿ ಮನುಷ್ಯ ಮನುಷ್ಯ ಸಂಬಂಧಗಳ ಅತ್ಯಂತ ಶ್ರೇಷ್ಠ ಮೌಲ್ಯಗಳಲ್ಲಿ ಬದುಕಲು ಮತ್ತು ಸಮಾನತೆಯ ಸುಂದರ ನಾಡನ್ನು ನಿರ್ಮಿಸಲು ಅವಕಾಶವಿದೆ. ಒಕ್ಕಲಿಗರು

ಈ ಎರಡರಲ್ಲಿ ಒಂದನ್ನು ಮಾತ್ರ ಆರಿಸಿಕೊಳ್ಳಲು ಅರ್ಹರು. ಎರಡರಲ್ಲೂ ಕಾಲಿರಿಸಲು ಅನರ್ಹರು. ಕುವೆಂಪು ಅವರನ್ನು ಒಪ್ಪಿಕೊಂಡಲ್ಲಿ ಜಾತಿ, ಮತ ಸಂಬಂಧಗಳನ್ನು ಬಿಡಲೇಬೇಕು. ದುರಂತವೆಂದರೆ, ಇಂದು ಕುವೆಂಪು ಅವರನ್ನು ಹೊಗಳುತ್ತಿರುವ ಮಂದಿಯಲ್ಲಿ ಬಹುಪಾಲು ಜನ ಒಕ್ಕಲಿಗರ ಮಠ -ಜಾತಿಗಳಲ್ಲಿ ಸಂಬಂಧವಿರಿಸಿಕೊಂಡಿದ್ದಾರೆ. ಒಬ್ಬ ಕವಿ ಬದುಕಿರುವಾಗಲೇ ಆತನ ತತ್ವಗಳಿಗೆ ಬಂದೊದಗಿರುವ ಸ್ಥಿತಿ ಹೆದರಿಕೆ ಹುಟ್ಟಿಸುತ್ತದೆ. ಈ ಬಗೆಗೆ ಎಲ್ಲ ಒಕ್ಕಲಿಗರೂ ಅಳವಾಗಿ ಯೋಚನೆ ಮಾಡಬೇಕಾಗಿದೆ.



# ಅನಿಕೇತನ - ಒಂದು ದಾರ್ಶನಿಕ ಕವಿತೆ

ಕುವೆಂಪು ಅವರು'ದರ್ಶನ'ಎಂದರೇನು ? ಎಂದು ಪ್ರಶ್ನೆ ಹಾಕಿಕೊಂಡು, ತಮಗೆ ತಾವೆ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನಕ್ಕೆ ತೊಡಗುತ್ತಾರೆ. ಅವರ ದೃಷ್ಟಿಯಲ್ಲಿ 'ದರ್ಶನ'ವೆಂದರೆ ನಿಯಮಬದ್ಧವಾದ ಅಥವಾ 'ತರ್ಕಬದ್ಧವಾದ' ಅಲೋಚನೆಗಳ ಸಮುದಾಯವಲ್ಲ. ಭಾವ, ಕಲ್ಪನೆ ಮತ್ತು ಆಲೋಚನೆಗಳ ವಿದ್ಯುದಾಲಿಂಗನದಿಂದ ಸಂಭವಿಸುವ ಪ್ರತಿಭಾ ಜ್ಯೋತಿ. ಅಂತಹ 'ದರ್ಶನಸಂಪಾದನೆ'ಯು ಕವಿಗೆ ತಪಸ್ಸಿನಿಂದಲೂ ಅವಲೋಕನದಿಂದಲೂ ಮಾತ್ರವೇ ಸಾಧ್ಯವಾಗುವಂಥದು. ಇಲ್ಲಿ ಕುವೆಂಪು ತಪಸ್ಸು ಮತ್ತು ಅವಲೋಕನ ಶಬ್ದಗಳ ಮೇಲೆ ಹೆಚ್ಚು ಒತ್ತು ಕೊಟ್ಟಿರುವುದನ್ನು ಗಮನಿಸಬೇಕು, 'ತಪಸ್ಸು' ಸ್ವಪ್ರಯತ್ನ ಮತ್ತು ಆಚಂಚಲಾಕಾಯಕದಿಂದ ಕೂಡಿರುವಂಥದ್ದು. 'ಅವಲೋಕನ' ತನ್ನ ಸಾಮಾಜಿಕ ಆವರಣದಿಂದ, ಸಂವೇದನೆಯಿಂದ, ಅರಿವಿನಿಂದ ಬೆಳೆಯುವ ಕವಿದೃಷ್ಟಿಯನ್ನು ಸೂಚಿಸುವಂಥದ್ದು. ಅಂದರೆ, ಕುವೆಂಪು ದೃಷ್ಟಿಯಲ್ಲಿ 'ದರ್ಶನ'ವೆಂಬುದು ಕವಿಯು ಪ್ರಯತ್ನ ಮತ್ತು ಪ್ರಜ್ಞೆಗಳ ಮೂಲಕಗಳಿಸುವ ಒಂದು ಅವ್ಯಕ್ತ ಅನುಭವ. ಅದು ಕೇವಲ ಕಾಲ್ಪನಿಕ ಜಗತ್ತನ್ನು ಮಾತ್ರ ಒಳಗೊಳ್ಳದೆ, ವಾಸ್ತವ ಜಗತ್ತಿನ ನೆಲೆಯಲ್ಲಿ ನಿಂತು ಎತ್ತರಕ್ಕೆ ಮುಟ್ಟಬೇಕಾದ ಸಂದರ್ಭದಲ್ಲಿ ಕವಿಚಿತ್ತ ವಿಶ್ಲೇಷಣೆಗೊಳಿಸಬೇಕಾದ ಅನಿವಾರ್ಯತೆಯನ್ನು ಇದು ಸೂಚಿಸುವಂತಹದು.

ದರ್ಶನವನ್ನು ಕುರಿತು ಕುವೆಂಪು ಹೀಗೆ ಹೇಳುತ್ತಾರೆ. "ದರ್ಶನ ಎಂಬ ಪದಕ್ಕೆ ಪರೋಕ್ಷವಾಗಿ ಅನುಭವಿಸಿ ಕಾಣುವುದು ಎಂದರ್ಥ. ಬುದ್ದಿ, ಚಿಂತನ, ತರ್ಕ ಅಥವಾ ಅವರಿವರ ಹೇಳಿಕೆ -ಇವು ಯಾವ ಉಪಾಧಿಗಳೂ ಇಲ್ಲದೆ ನೇರವಾಗಿ ಗ್ರಹಿಸುವ ಶಕ್ತಿ ದರ್ಶನ"1 ಈ ಗ್ರಹಿಸುವ ಶಕ್ತಿ 'ದರ್ಶನ' ದ ಅಮೂರ್ತತೆಯನ್ನು ಕುವೆಂಪು ಅವರು ಹೇಳತ್ತಿರುವ ಸಂದರ್ಭದಲ್ಲೂ ನಮಗೆ ಅನಿಸುವ ಸತ್ಯ: ಅನಿಸಬೇಕಾದರೂ ಸ್ವಪ್ರಯತ್ನ ಕ್ವಚಿತ್ತಾದರೂ ಬೇಕು ಎಂಬುದು.

ಕವಿ ತಾನು ಕಂಡ ದರ್ಶನವನ್ನೂ 'ಚಿಂತನ'ಕ್ಕೂ, ಚಿಂತನದಿಂದ ಅದನ್ನು 'ವರ್ಣನ'ಕ್ಕೂ ಇಳಿಸುತ್ತಾನೆ. ಇಲ್ಲಿ 'ವರ್ಣನ' ಎಂದರೆ 'ರೂಪ' ಕೊಡುವ ಕ್ರಿಯೆ ಎಂದೇ ಅರ್ಥ. 'ರೂಪ'ದ ನೆರವಿಲ್ಲದೆ 'ಚಿಂತನ'ವಾಗಲಿ, 'ದರ್ಶನ'ವಾಗಲಿ ಅಭಿವ್ಯಕ್ತಿಯನ್ನು ಪಡೆಯಲಾರದು. ಕನ್ನಡ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ 'ದರ್ಶನ ವಿಮರ್ಶೆ'ಬಗ್ಗೆ ಏಕದನಿಯಾಗಿ ಮಾತನಾಡಿ ಬರೆದ ಕುವೆಂಪು

---

1. ತಪೋನಂದನ, ಪುಟ ೧೨೨ (ಎರಡನೆಯ ಮುದ್ರಣ)

2. ನೋಡಿ, ತಪೋನಂದನ, ಕಾವ್ಯವಿಮರ್ಶೆಯಲ್ಲಿ ಪೂರ್ಣದೃಷ್ಟಿ

ಅವರು ದರ್ಶನ ಕಾವ್ಯದ ಬಗ್ಗೆ ಲಕ್ಷಣಗಳನ್ನು ಕೂಡ ಒದಗಿಸುತ್ತಾರೆ. ಕಾಳಿದಾಸನ 'ಶಾಕುಂತಲಾ' ನಾಟಕವನ್ನು ಈ ನಿಟ್ಟಿನಲ್ಲಿ ವಿಮರ್ಶೆ ಮಾಡಿ 'ಮಾದರಿ'ಯನ್ನು ಸಿದ್ಧಗೊಳಿಸಿದ್ದಾರೆ 2

ಕವಿ ತನ್ನ ಅನುಭೂತಿಯಲ್ಲಿ ಪಡೆದ'ದರ್ಶನ'ದ ಎತ್ತರದಲ್ಲೇ ಕಾವ್ಯವನ್ನು ರಚಿಸಲಾರ ಎಂಬುದು ಕೂಡ ಗಮನಾರ್ಹ ಸಂಗತಿ. ಆ 'ಎತ್ತರ' ಕೇವಲ ಕವಿಯ ಎತ್ತರ. 'ಸಾಮಾಜಿಕರು' ಆ ಎತ್ತರಕ್ಕೆ ಏರಲು ಆಗುವುದಿಲ್ಲ. ಸಾಮಾಜಿಕರಿಗೆ ಅರ್ಥವಾಗುವ ಒಂದು ವರ್ಣನಾ ಪ್ರಪಂಚವನ್ನು ಕವಿ ಸೃಷ್ಟಿಸಬೇಕಾಗುತ್ತದೆ. ಆದ್ದರಿಂದ ಏರಿ ಮುಟ್ಟಿದ 'ದರ್ಶನ'ವನ್ನು ಇಳಿದು 'ಕಟ್ಟ'ಬೇಕಾಗುತ್ತದೆ. ಅದಕ್ಕಾಗಿ ಅಧ್ಯಯನ ಅಭ್ಯಾಸ ದೇಶ ಕಾಲ ಭಾಷೆ ಇತ್ಯಾದಿಗಳೆಲ್ಲವನ್ನೂ ದುಡಿಸಿ ಕೊಳ್ಳತೊಡಗುತ್ತಾನೆ. 'ದರ್ಶನ' ಅಂತರ್‌ಶಕ್ತಿಯಾಗಿ ಕೆಲಸ ಮಾಡಿದರೆ, ಇವೆಲ್ಲವೂ ಕಾಯ ರೂಪಗಳಾಗಿ ಅಭಿವ್ಯಕ್ತಿ ಪಡೆಯುತ್ತವೆ.

ಅಂದರೆ ಒಂದು ಕೃತಿಯನ್ನು ಅರ್ಥಮಾಡಿಕೊಳ್ಳಬೇಕಾದರೆ ಕವಿ ನಮಗೆ ಅಷ್ಟು ಮುಖ್ಯವಾಗುವುದಿಲ್ಲ. ಆ ಕವಿ ಕೃತಿಯೊಳಗೆ ಮೂಡಿ ಬಂದಿರುತ್ತಾನೆ. ಅವನ ದರ್ಶನವನ್ನು ಪಡೆಯಬೇಕಾದರೆ ಅವನ ಕೃತಿ ಪ್ರವೇಶವೊಂದೇ ಅನಿವಾರ್ಯ ಮಾರ್ಗವಾಗುತ್ತದೆ. 'ನಾವು ಅವನ ಕೃತಿಯಿಂದಲೇ ಅವನ ದರ್ಶನಕ್ಕೆ ಹೋಗಬೇಕಾಗುತ್ತದೆ. ಅವನ ಕೃತಿ ಪ್ರತಿಮೆ ಅವನ ದರ್ಶನಕ್ಕೆ ಅನುರೂಪಿ. ಕುವೆಂಪು ಅವರ ಈ ವಾದವು ಮೇಲು ನೋಟಕ್ಕೆ ಭಿನ್ನವಾಗಿ ಕಂಡರೂ ಪಾಶ್ಚಾತ್ಯ ಸಾಹಿತ್ಯವಿಮರ್ಶೆಯ ರೂಪನಿಷ್ಠ ವಿಮರ್ಶೆಗೆ ಹತ್ತಿರವಾಗಿ ಕಾಣುತ್ತದೆ. ಕೃತಿಯ ವಸ್ತುವನ್ನು ಮತ್ತು ಸತ್ತ್ವವನ್ನು ಅರ್ಥಮಾಡಿಕೊಳ್ಳಬೇಕಾದರೆ ನಾವು ಅದರ 'ರೂಪ'ದ ಮೊರೆ ಹೋಗುವುದು ಅನಿವಾರ್ಯವಾಗುವ ರೀತಿಯಲ್ಲಿಯೇ,'ದರ್ಶನ'ವನ್ನು ಅರ್ಥ ಮಾಡಿಕೊಳ್ಳಲು ಅನಿವಾರ್ಯವಾಗಿ 'ಕೃತಿ ಪ್ರತಿಮೆ'ಯ ಮೊರೆ ಹೋಗಬೇಕಾಗುತ್ತದೆ. ಅಂದರೆ 'ಕೃತಿ ಪ್ರತಿಮೆ'ಯ ತನ್ನ ಸೃಷ್ಟಿಕ್ರಿಯೆಯ ಒಟ್ಟಾರೆ ಸಂದರ್ಭದಲ್ಲಿ ಅಭಿವ್ಯಕ್ತಿಸುವ ಧ್ವನಿ ಪ್ರಪಂಚಕ್ಕೆ ದರ್ಶನವೆನ್ನು ಬಹುದು. ಕುವೆಂಪು ಅವರು ಪಾಶ್ಚಾತ್ಯರ ರೂಪನಿಷ್ಠ ಸಾಹಿತ್ಯ ವಿಮರ್ಶೆಗೆ ಸಂವಾದಿಯಾಗಿ ಭಾರತೀಯ ತತ್ತ್ವಶಾಸ್ತ್ರ ಮತ್ತು ಕಾವ್ಯಮಿಮಾಂಸೆಗಳ ತಾತ್ತ್ವಿಕ ತಳಹದಿಯ ಮೇಲೆ ಈ 'ದರ್ಶನ' ವಿಮರ್ಶೆಯನ್ನು ತುಂಬಾ ಮನೋವೈಜ್ಞಾನಿಕವಾಗಿ ರೂಪಿಸಿರುವುದನ್ನು ಗಮನಿಸಬಹುದು.

* * * *

'ಅನಿಕೇತನ' ಕವನ ನಾಲ್ಕು ಭಾಗಗಳಲ್ಲಿ ಆರೋಹಣ ಕ್ರಿಯೆಯಲ್ಲಿ ಬೆಳೆಯುತ್ತಾ ಸಾಗುತ್ತದೆ. ಅತ್ಯಂತ ಸರಳ ಕನ್ನಡ ಪದಗಳಿಂದ ರಚಿತವಾಗಿರುವ ಈ ಪದ್ಯ ಆಡುಮಾತುಗಳನ್ನು ಲಯಬದ್ಧವಾಗಿ ಬಳಸಿಕೊಂಡಿದೆ. 'ಓ ನನ್ನ ಚೇತನ, ಆಗು ನೀ ಅನಿಕೇತನ'ಎಂಬ ಎರಡು ಸಾಲುಗಳು ಪ್ರತಿಭಾಗದಲ್ಲಿ ಪುನರಾವರ್ತನೆಗೊಂಡು ಕ್ರಿಯೆಗೆ ಒತ್ತುಕೊಡುತ್ತವೆ. 'ಚೇತನ' 'ಅನಿಕೇತನ'ವಾಗಬೇಕಾದ

3. ತಪೋನಂದನ, ೨ ಪುಟ ೧೨೪

ಅನಿವಾರ್ಯತೆಯ ಬಗ್ಗೆ ಮನಸ್ಸನ್ನು ಕೇಂದ್ರೀಕರಿಸುವುದೇ ಈ ಪುನರಾವರ್ತನೆಯ ಉದ್ದೇಶ. ಈ ಪಲ್ಲವಿ ರೂಪದ ಸಾಲುಗಳು ಲಯಬದ್ಧವಾಗಿರುವುದರಿಂದ ಓದುಗನ ಮನಸ್ಸಿನಲ್ಲಿ ಉಳಿಯಲು ಕೂಡ ಸಹಾಯಕವಾಗಿದೆ. ಮೇಲುನೋಟಕ್ಕೆ ಅಥವಾ ಪಲ್ಲವಿಯ ಸ್ತರದಲ್ಲಿ 'ಚೇತನ'ಕ್ಕೆ ಮಾತ್ರ ಸೀಮಿತವಾದ ಪದ್ಯ ಎಂದು ತೋರಿದರೂ ಅದನ್ನು ಗಾಢವಾದ ಅನುಭವ ಕ್ರಿಯೆಗೆ ತೊಡಗಿಸಿಕೊಂಡಾಗ ಅದರಿಂದಾಚೆಗೆ ವಿಸ್ತರಿಸುತ್ತದೆ. 'ಅನಿಕೇತನ'ಎಂಬುದು 'ಕೇತನ'ವನ್ನು, 'ಮನೆ'ಯನ್ನು ನೆನಪಿಗೆ ತಂದು ನಿಲ್ಲಿಸುವುದರಿಂದ, ಸಾಮಾಜಿಕ ಸ್ತರದಲ್ಲಿ 'ಚೇತನ' ದ ಬಂಧನಗಳನ್ನು ಅದು ಸ್ಫುರಿಸುತ್ತದೆ. 'ಕೇತನ'ವೆಂಬುದು ಶಬ್ದ ಚಿತ್ರದಲ್ಲಿ ನಾಲ್ಕುಗೋಡೆಗಳ ಸೀಮಿತತೆಯ ಚೌಕಟ್ಟನ್ನು ಒಳಗೊಂಡದ್ದು. 'ಚೇತನ' ಆತ್ಮ, ಮನಸ್ಸು, ಪ್ರಜ್ಞೆ - ಅದನ್ನು ದಾಟುವ ಶಕ್ತಿಯನ್ನು ಪಡೆದಿರುವಂಥದ್ದು. ಸಾಮಾಜಿಕ ಮಾನಸಿಕ ಬಂಧನಗಳನ್ನು ಬಿಡಿಸಿಕೊಂಡು 'ಅನಿಕೇತನ'ವಾಗು ಎಂದು ಕರೆ ಕೊಡುವುದು ಮುಖ್ಯ.

ಅದರಲ್ಲೂ 'ಓ ನನ್ನ ಚೇತನ' ಎಂಬಲ್ಲಿನ 'ನನ್ನ' ಪದಕ್ಕಿರುವ ಒತ್ತನ್ನು ಗಮನಿಸಬೇಕು. ಕವಿ ಈ ದಾಟುವ ಕ್ರಿಯೆಯಲ್ಲಿ ಮೊದಲು ತನ್ನನ್ನು ತಾನು ತೊಡಗಿಸಿಕೊಳ್ಳಲು ಯತ್ನಿಸುತ್ತಾನೆ. ಅಂದರೆ ದರ್ಶನ ಕ್ರಿಯೆಯ 'ಆಲೋಚನೆ'ಗೆ ಹೆಚ್ಚು ಬೆಲೆ ಸಿಕ್ಕಿರುವುದು ಗಮನಾರ್ಹ. ಮೊದಲು ತನ್ನ ಬಿಡುಗಡೆ. ಬಿಡುಗಡೆಗೊಂಡನಂತರ ಪಡೆಯುವ ದರ್ಶನಲಾಭ. ಆ ದರ್ಶನ ಲಾಭವನ್ನು ಇತರರಿಗೆ ಅನಂತರ ಹೇಳುವ ಆಸೆ - ಈ ಸ್ತರಗಳಲ್ಲಿ 'ನನ್ನ' ಪದಕ್ಕಿರುವ ಒತ್ತು ಅರ್ಥಸ್ಫುರಿಸುತ್ತದೆ.

ಚೇತನ ಅನಿಕೇತನವಾಗುವ ಸಂದರ್ಭದಲ್ಲಿ ಅದು ಅನೇಕ 'ಕೇತನ'ಗಳನ್ನು ದಾಟಬೇಕಾಗುತ್ತದೆ. ಆ 'ಕೇತನ'ಗಳೇ ಆತ್ಮಕ್ಕಿರುವ ಸಾಮಾಜಿಕ ಬಂಧನಗಳು. ಆ ಸಾಮಾಜಿಕ ಬಂಧನಗಳ ವಿವಿಧ ರೂಪಗಳನ್ನು 'ಅನಿಕೇತನ' ಪದ್ಯದ ಮೊದಲ ಎರಡು ಭಾಗಗಳು ಹೇಳುತ್ತವೆ. ಮೊದಲ ಭಾಗ ಹೀಗಿದೆ:

ರೂಪ ರೂಪಗಳನು ದಾಟಿ,
ನಾಮ ಕೋಟಿಗಳ ಮೀಟಿ
ಎದೆಯ ಬಿರಿಯೆ ಭಾವ ದೀಟಿ,
ಓನನ್ನ ಚೇತನ,
ಆಗು ನೀ ಅನಿಕೇತನ !

'ರೂಪ ರೂಪ' ಮತ್ತು 'ನಾಮ ಕೋಟಿ'ಶಬ್ದಗಳು ತಂದು ಕೊಡುವ ಅರ್ಥ ಸಂಪತ್ತನ್ನು ಗಮನಿಸಬೇಕು. ಕುವೆಂಪು ಅವರ ದಾರ್ಶನಿಕತೆ ಸಾಮಾಜಿಕ ನೆಲೆಯಿಂದ ದೂರ ಸರಿದು ನಿಂತುದಲ್ಲವೆಂಬುದೇ ಮೆಚ್ಚುವ ಅಂಶ. ರೂಪ ಅನ್ನುವುದು ಆಕಾರ, ಬಣ್ಣ, ಸೌಂದರ್ಯ ಮುಂತಾದ ಪರಿಕಲ್ಪನೆಗಳನ್ನು ಕಣ್ಣಿನ ಮುಂದೆ ತೆರೆದಿಡುತ್ತದೆ. ಜಗತ್ತಿನ ಮಾನವ ಇಂದು ರೂಪ, ಬಣ್ಣ, ಆಕಾರ ಮುಂತಾದ 'ಕೇತನ'ಗಳನ್ನು ಕಟ್ಟಿಕೊಂಡು ಬದುಕುತ್ತಾ ಕುಬ್ಜನಾಗಿದ್ದಾನೆ. 'ನಾಮಕೋಟಿ'

ಎನ್ನುವುದು ಮಾನವನ ಧಾರ್ಮಿಕ ನೆಲೆಗಳಿಂದ ಬಂದ ಗುರುತಿಸುವಿಕೆಗೆ ಸಂಬಂಧ ಪಟ್ಟಿದ್ದು. ಇವುಗಳೆಲ್ಲವೂ ವ್ಯಕ್ತಿಯನ್ನು ಸೀಮಿತಿಗೊಳಿಸುವ ಪರಿಕರಗಳು. ಇವುಗಳಿಂದ ವ್ಯಕ್ತಿ 'ದಾಟ'ಬೇಕಾಗುತ್ತದೆ. ವ್ಯಕ್ತಿ ಹೆಸರುಗಳಿಂದಾಚೆಗೆ, ಬಣ್ಣ ಆಕಾರ ಸೌಂದರ್ಯದಾಚೆಗೆ ಬೆಳೆದು ವಿಶ್ವಮಾನವನಾಗ ಬಲ್ಲನೆಂಬುದು ಕವಿಯ ಆಶಯ. ಹಾಗೆ ಆಗಬೇಕಾದರೆ ಚೇತನ 'ದಾಟ'ನ್ನು ಕ್ರಿಯಾರೂಪಕ್ಕೆ ತೊಡಗಿಸಬೇಕಾಗುತ್ತದೆ. ಹಾಗೆ 'ದಾಟವಂಥ ಮೀಟುವಂಥ, ಕ್ರಿಯೆಯಲ್ಲಿ ತೊಡಗಿದಾಗ ಭಾವದ ಈಟಿ ಎದೆಯನ್ನ ಬಿರಿಯುತ್ತದೆ ಎಂದು ಕವಿ ಎನ್ನುತ್ತಾರೆ. ಅಂದರೆ ಭಾವ ಸ್ಫುರಣಗೊಳ್ಳುತ್ತದೆ. ಅವ್ಯಕ್ತ ಅನುಭವ ಪ್ರಪಂಚದ ಚಿತ್ರ ಚೇತನದ ಮುಂದೆ ತೆರೆದುಕೊಳ್ಳುತ್ತದೆ.

ನೂರು ಮತದ ಹೊಟ್ಟ ತೂರಿ,
ಎಲ್ಲ ತತ್ತ್ವದೆಲ್ಲೆ ಮೀರಿ,
ನಿರ್ದಿಗಂತವಾಗಿ ಏರಿ,
ಓ ನನ್ನ ಚೇತನ,
ಆಗು ನೀ ಅನಿಕೇತನ'

ಒಂದರ್ಥದಲ್ಲಿ ಮೊದಲ ಭಾಗದ ಆಶಯವನ್ನು ಈ ಎರಡನೆಯ ಭಾಗವು ಮುಂದುವರಿಸುತ್ತದೆ. ಚೇತನ ಸಾಗಬೇಕಾದ ಸಾಮಾಜಿಕ ಬಂಧನದ ಮತ್ತೊಂದು ಮುಖವನ್ನು ಇಲ್ಲಿ ಕವಿ ನಿರ್ದಿಷ್ಟವಾಗಿ ಸೂಚಿಸುತ್ತಾರೆ. ವ್ಯಕ್ತಿಯ ವ್ಯಕ್ತಿತ್ವವನ್ನು ಅತ್ಯಂತ ಕುಬ್ಜಗೊಳಿಸಿರುವ ಬಣ್ಣ ಆಕಾರ ಹೆಸರುಗಳಿಗಿಂತ ಕಠಿಣವಾದ ಕದಂಬಬಾಹುಗಳನ್ನು ಹೊಂದಿರುವ ಮತಗಳ ಬಗ್ಗೆ ಹೇಳುತ್ತಾರೆ. ಈ ಮಾತುಗಳ ಬಗ್ಗೆ ಕವಿ ಎಷ್ಟು ವಿಮುಖರಾಗಿದ್ದಾರೆಂಬುದನ್ನು 'ಹೊಟ್ಟ' ತೂರಿ ಎಂಬ ಶಬ್ದಗಳು ಅಭಿವ್ಯಕ್ತಿಸುತ್ತವೆ. ಏನೇನೂ ಸತ್ತ್ವವಿಲ್ಲದ 'ಕೇತನ' ಈ ಮತವೆಂದು ಕವಿ 'ಹೊಟ್ಟು'ಪದದಿಂದ ಮೂಡಿಸುತ್ತಾರೆ. ಅದು 'ತೂರಿ' ಹೋಗುವಂಥದ್ದು. ಆದ್ದರಿಂದ ಚೇತನ ಈ ಮತವನ್ನು ತೂರಬೇಕು ಎಂಬಲ್ಲಿ ಕವಿಗಿರುವ ಐತಿಹಾಸಿಕ ಪ್ರಜ್ಞೆಯನ್ನು ಗಮನಿಸಬೇಕು.

ಜಗತ್ತಿನಲ್ಲಿ ನೂರು ಮತಗಳು ನೂರು ತತ್ತ್ವಗಳ ಆಧಾರದ ಮೇಲೆ ನಿಂತಿವೆ. ಅವೆಲ್ಲವೂ ವ್ಯಕ್ತಿ ವ್ಯಕ್ತಿಯ ಮಧ್ಯೆ ಅಂತರವನ್ನು ಸೃಷ್ಟಿಸಿವೆ. ಜಗತ್ತಿನಲ್ಲಿ ಅವು ಹರಿಸಿರುವಷ್ಟು ರಕ್ತವನ್ನು ಮತ್ಯಾವ ಸಾಮಾಜಿಕ ಬಂಧನವೂ ಉಂಟುಮಾಡಿಲ್ಲ. ಆದ್ದರಿಂದ ಚೇತನವು ಅವುಗಳಿಂದ ದೂರ ವಿರಬೇಕಾಗುತ್ತದೆ. ಅವು ಪರಿಶುದ್ಧವಾದ ಚೇತನವನ್ನು ಮಲಿನಗೊಳಿಸುತ್ತವೆ. ಕವಿ ಚೇತನವನ್ನು ಕುರಿತು ಹೇಳುತ್ತಾರೆ. 'ನಿರ್ದಿಗಂತವಾಗಿ ಏರು' ಚೇತನದ ಏರುವ ಹಂತಕ್ಕೆ 'ಅಂತ'ವಿರಬಾರದು;ದಿಕ್ಕು ಇರಬಾರದು, ಅದು ಸರ್ವವ್ಯಾಪಿಯಾದ ಏರುವ ಕ್ರಮದಲ್ಲಿ ತೊಡಗಿಸಿಕೊಳ್ಳಬೇಕು, ಅದು ಮತವಿಮುಖವಾಗಿರಬೇಕು.

ಮುಂದಿನ ಭಾಗದಲ್ಲಿ 'ನಿರ್ದಿಗಂತ'ವಾಗಿ ಏರಿದ ಚೇತನದ ಹಾರುವ ಕ್ರಮವನ್ನು ಕವಿ ಸೂಚಿಸುತ್ತಾರೆ :

ಎಲ್ಲಿಯೂ ನಿಲ್ಲದಿರು ;
ಮನೆಯನೆಂದು ಕಟ್ಟದಿರು;
ಕೊನೆಯನೆಂದೂ ಮುಟ್ಟದಿರು;
ಓ ಅನಂತವಾಗಿರು!

ನಿರ್ದಿಗಂತವಾಗಿ ಏರಿದ ಚೇತನ ತನ್ನ ಎಲ್ಲ ಕರಣಗಳನ್ನು ಸದಾ ತೆರೆದಿರಬೇಕೆಂಬ, ಯಾವುದೇ ಒಂದು ತತ್ತ್ವಕ್ಕೆ ಸಿಲುಕಬಾರದೆಂಬ ವಿಶ್ವಮಾನವ ತತ್ತ್ವವನ್ನು ಪಡೆಯಬೇಕಾದರೆ ಒಂದು ಕೊನೆಗೆ ಅಂಟಬಾರದೆಂಬ ಧ್ವನಿಯನ್ನು ಇಲ್ಲಿ ಕವಿ ಹೊರಡಿಸುತ್ತಾರೆ. ಆತ್ಮಕ್ಕೆ ಮನೆಯಿಲ್ಲ:ಕೊನೆಯಿಲ್ಲ. ಅದು 'ಅನಂತ' ವಾದುದು. ಆತ್ಮ ಕೊನೆಯನ್ನು ಮುಟ್ಟಿದರೆ ಬೆಳವಣಿಗೆ ನಿಲ್ಲುತ್ತದೆ. ಅನಂತವಾಗಿರುವಿಕೆ ವಿಕಾಸದ ಸೂಚನೆ:ಮನೆಯನ್ನು ಕಟ್ಟದಿರುವುದು ಕರಣಗಳು ತೆರೆದಿರುವಿಕೆಗೆ ಸೂಚನೆ. ಕವಿ ಈ ಅಂಶಗಳನ್ನು 'ಕೃತಿಪ್ರತಿಮೆ'ಯಲ್ಲಿ ಹೊರಡಿಸುವುದು ನವೀನವಾಗಿದೆ.

ಮನೆಯನ್ನು ಕಟ್ಟದೆ, ಕೊನೆಯನ್ನು ಮುಟ್ಟದೆ 'ಅನಂತವಾಗಿರುವ'ಚೇತನ ಆಗಬೇಕಾಗಿರುವ ಸ್ಥಿತಿಯು ಹೇಗಿರಬೇಕೆಂಬುದನ್ನು ಕವಿ ಹೀಗೆ ಕಂಡಿರಿಸುತ್ತಾರೆ:

ಅನಂತ ತಾನ್ ಅನಂತವಾಗಿ
ಆಗುತಿಹನೆ ನಿತ್ಯ ಯೋಗಿ ;
ಅನಂತ ನೀ ಅನಂತವಾಗು ;
ಆಗು, ಆಗು, ಆಗು, ಆಗು,
ಓ ನನ್ನ ಚೇತನ,
ಆಗು ನೀ ಅನಿಕೇತನ !

ಅನಂತ ಅನಂತವಾಗುವ ಸ್ಥಿತಿ ಇದು. ಅದ್ವೈತ ಕಲ್ಪನೆಯ ಮೂಲಪಾಕವಿದು. 'ಅನಂತ' ಎಂಬುದು 'ಕೊನೆಯಿಲ್ಲದ್ದು' ಎಂಬ ಅರ್ಥವನ್ನು ಕೊಡುವ ರೀತಿಯೇ 'ಬಯಲು'ಎಂಬ ಅರ್ಥವನ್ನು ಸ್ಫುರಿಸುವುದರಿಂದ ಅದಕ್ಕೆ ಮತ್ತೂ ವಿಶಾಲವಾದ ತಳಹದಿ ಸಿದ್ಧಿಗೊಳ್ಳುತ್ತದೆ. ಈ ಹಂತವನ್ನು ತಲುಪುವ ಚೇತನ 'ಯೋಗಿ'ಯಾಗುವುದಿಲ್ಲ, ನಿತ್ಯಯೋಗಿಯಾಗುತ್ತದೆ. ಯೋಗಿಯ ಮನಸ್ಸು ಸದಾ ಜ್ಞಾನಾಭಿಲಾಷೆಯ ಕಡೆ, ಸಿದ್ಧಿಯ ಕಡೆ ಸಾಗಬೇಕಾದರೆ ಅದು'ಅನಂತ'ದ ಕಡೆ ತುಡಿಯುತ್ತಿರಬೇಕಾಗುತ್ತದೆ. ಸದಾ 'ಅನಂತ'ದ ಕಡೆ ತುಡಿಯುವ ಚೇತನ ತನ್ನ ಎಲ್ಲ ಬಂಧನಗಳನ್ನು ಕಳಚಿಕೊಂಡು ನಿಂತಾಗ, ತಾನೇ 'ಅನಂತ'ವಾಗುತ್ತದೆ. ಕವಿ ಈ ಸ್ಥಿತಿಯ ಚೇತನವನ್ನು 'ಅನಂತ'ವೆಂದು ಕರೆಯುತ್ತಾರೆ. (ಅನಂತ ನೀ ಆನಂತವಾಗು)ಬರೀ 'ಅನಂತವಾಗು'ವುದು ಮಾತ್ರವಲ್ಲ ಸದಾ ಆಗು, ಆಗುತ್ತಿರಬೇಕಾಗುತ್ತದೆ. ಕವಿ ಈ ಕ್ರಿಯಾಪದಗಳಲ್ಲಿ ಚೇತನ 'ಅನಂತವಾಗುವ' ಕ್ರಿಯೆಯ ನಿರಂತರತೆಯನ್ನು ಧ್ವನಿಸುತ್ತಾರೆ.

'ಅನಿಕೇತನ' ಪದ್ಯದಲ್ಲಿ ಚೇತನ ಸಾಗಿ ಹೋಗುವ ಪ್ರಕ್ರಿಯೆಯಲ್ಲಿ ಅದು ದಾಟಬೇಕಾಗುತ್ತದೆ. ಏರಬೇಕಾಗುತ್ತದೆ; ಮುಟ್ಟಬೇಕಾಗುತ್ತದೆ. ಅನಂತರ ಅದು 'ಅನಂತ'ವಾಗುವ ಸಾಧ್ಯತೆ ಇದೆ. ಪದ್ಯದ ಮೊದಲ ಭಾಗದಲ್ಲಿ ಅದರ ಭಾವದ ಸಂಘರ್ಷದೊಡನೆ ಪ್ರಾರಂಭವಾಗಿ, ಎರಡನೆಯ ಭಾಗದಲ್ಲಿ ಅದು ಎಲ್ಲೆಗಳನ್ನು ಮೀರಿ ನಿಂತು 'ದೂರ'ವನ್ನು ಸಾಧಿಸಿಕೊಳ್ಳುತ್ತದೆ. 'ದೂರ'ವನ್ನು ಏರುವುದರಿಂದಾಗಿ ಅದು ಅನಂತವಾಗುತ್ತದೆ. ಈ ಅನಂತವಾಗಿ ಬೆಳೆದು. ಅನಂತವಾಗಿ ನಿಂತು, ಅನಂತವೇ ಆಗುವ ಕ್ರಿಯೆ ಪದ್ಯದ ಕೊನೆಯಲ್ಲಿ ಚೇತನ ಸಾಧಿಸುವ ಸಿದ್ಧಿ, ದರ್ಶನ.

ಕವಿ ಈ ಪದ್ಯದಲ್ಲಿ ಕ್ರಿಯಾ ಪದಗಳನ್ನು ದುಡಿಸಿಕೊಂಡಿರುವುದು ಅಸಾಧಾರಣವಾದುದು. ಚೇತನ ಸಾಗಿ ಹೋಗುವ ಕ್ರಿಯೆಯೇ ಪದ್ಯದಲ್ಲಿ ಮುಖ್ಯವಾದ್ದರಿಂದ ಕ್ರಿಯಾಪದಗಳು ಪ್ರಮುಖ ಪಾತ್ರವಹಿಸುತ್ತವೆ. ದಾಟಿ, ಮೀಟಿ, ತೂರಿ, ಮಿರಿ, ಏರಿ, ನಿಲ್ಲಿದಿರು, ಕಟ್ಟದಿರು, ಮುಟ್ಟದಿರು, ಆಗು - ಈ ಕ್ರಿಯಾಪದಗಳು ವಸ್ತುಗಳನ್ನು ಸಮರ್ಥವಾಗಿ ನಿರ್ವಹಿಸುತ್ತವೆ. ಆದರಲ್ಲೂ ಕೊನೆಯ ಭಾಗದ 'ಆಗು, ಆಗು, ಆಗು, ಆಗು, ಎಂಬ ಆಗುವ ಒಂದೇ ಕ್ರಿಯೆಯನ್ನು ಪುನರುಚ್ಚರಿಸುವುದರಿಂದ ಪದ್ಯಕ್ಕೆ ಬಂದಿರುವ ಭಾವ ತೀವ್ರತೆಯನ್ನು ಗಮನಿಸಬೇಕು. ಇದರಿಂದ ಕವಿ ಏಕಕಾಲದಲ್ಲಿ ಕವನದ ಪಾತ್ರವಾದ ಚೇತನದ ಮೇಲೆ ತರಲೆತ್ನಿಸುವ ಭಾವನಾತ್ಮಕ ಒತ್ತಡ ಹಾಗೂ ಕವನದ ಓದುಗನಲ್ಲಿ ಆ ಭಾವನೆಯನ್ನು ಸಾಧಾರಣೀಕರಣಗೊಳಿಸಲು ಮಾಡುವ ಪ್ರಯತ್ನ ಎರಡನ್ನೂ ಸಾಧಿಸಿದಂತಾಗಿದೆ.

ಕುವೆಂಪು ಅವರು ಈ ಕವನವನ್ನು ಇಂದು ವಿಶ್ವಮಾನವ ಗೀತೆ ಎಂದು ಕರೆಯುತ್ತಿದ್ದಾರೆ. ಬಿಡುಗಡೆಯನ್ನು ಪಡೆದ ಆತ್ಮದ ಗುರಿಯನ್ನು ಈ ಪದ್ಯ ಹೇಳುವುದರಿಂದ ಅವರ ವಿಶ್ವಮಾನವ ಸಂದೇಶಕ್ಕೆ ಈ ಪದ್ಯ ಅನುಕೂಲವಾಗಿದೆ. ಜೀವನದಲ್ಲಿ ಕವಿ ಕಂಡ ದರ್ಶನದ ಕೃತಿಪ್ರತಿಮೆಯಾಗಿ ಈ ಪದ್ಯ ನಿಂತಿದೆ.



# ಕುವೆಂಪು ಕವನಗಳಲ್ಲಿ ರೈತ

ಸಮಾಜವಾದಿ ಚಿಂತಕ ಡಾ. ರಾಮಮನೋಹರ ಲೋಹಿಯಾ ಒಂದು ಕಡೆ ಹೀಗೆ ಹೇಳುತ್ತಾರೆ: "ಸ್ವಾತಂತ್ರ್ಯ ಹೋರಾಟಕ್ಕೆ ಚರಕ ಸ್ಫೂರ್ತಿ ಶಕ್ತಿಯಾಗಿ ಕೆಲಸ ಮಾಡಿದಂತೆ, ಸ್ವತಂತ್ರ ಭಾರತಕ್ಕೆ ಗುದ್ದಲ್ಲಿ ಪ್ರೇರಕ ಶಕ್ತಿಯಾಗಬೇಕು". ಈ ಹೇಳಿಕೆಯಲ್ಲಿ ಸ್ವತಂತ್ರ ಭಾರತದಲ್ಲಿ ಆಗಬೇಕಿರುವ ರಚನಾತ್ಮಕ ಕೆಲಸದಲ್ಲಿ ಗುದ್ದಲಿಯ ಪಾತ್ರವನ್ನು ಗುರುತಿಸಿದ್ದಾರೆ. ಲೋಹಿಯಾ ನಿಜವಾದ ಭಾರತದ ಹೃದಯವನ್ನು ಅರ್ಥಮಾಡಿಕೊಳ್ಳಬಲ್ಲವರಾಗಿದ್ದರು. ಭೋಗಲಾಲಸೆಯ ನಗರಗಳನ್ನು ಕಟ್ಟುವುದರಿಂದ ದೇಶದ ಅಭಿವೃದ್ಧಿ ಸಾಧ್ಯವಾಗದೆಂದೂ ದೇಶ ಉದ್ಧಾರವಾಗಬೇಕಾದರೆ ಭಾರತದ ಗ್ರಾಮಿಣ ಬದುಕು ಕ್ರಿಯಾಶೀಲವೂ ಪ್ರಮುಖವೂ ಆಗಬೇಕೆಂದು ತಿಳಿದಿದ್ದರು. ದೇಶದ ಉದ್ಧಾರ ಗ್ರಾಮ ಭಾರತದಲ್ಲಿ ಅರ್ಥಾತ್ ರೈತನ ಬದುಕು ಹಸನಾಗುವುದರಲ್ಲಿದೆ ಎಂಬ ಸತ್ಯದ ಅರಿವು ಅವರಿಗಿತ್ತು.

ಆದರೆ ಸ್ವತಂತ್ರ ಭಾರತದಲ್ಲಿ ನಗರಗಳು ಬೆಳೆದವು. ಗ್ರಾಮಗಳು ನಿರ್ಲಕ್ಷ್ಯಕ್ಕೊಳಗಾದವು. ಇದರಿಂದಾಗಿ ದೇಶದ ಅಭಿವೃದ್ಧಿ ಸಾಧ್ಯವಾಗದೆ ಕುಂಠಿತವಾಯಿತು. ನಗರ ಗ್ರಾಮಗಳ ಮಧ್ಯೆ ಅಂತರ ಜಾಸ್ತಿಯಾಗಿ ರೈತ ಕೇವಲ ದುಡಿಯುವ ಎತ್ತಿನಂತಾಗಿ, ದುಡಿಮೆಗೆ ಸರಿಯಾದ ಪ್ರತಿಫಲವಿಲ್ಲದೆ ಎರಡನೆ ದರ್ಜೆಯ ಪ್ರಜೆಯಾಗತೊಡಗಿದ. ಸ್ವತಂತ್ರಪೂರ್ವ ಭಾರತದಲ್ಲಿ ಕಂಡಿದ್ದ ಗ್ರಾಮಸ್ವರಾಜ್ಯದ ಕನಸುಗಳು ಕಣ್ಮುಂದೆಯೇ ಅಲುಗಾಡತೊಡಗಿದವು. ಕವಿ ಕುವೆಂಪು ಹೀಗೆ ಬರೆಯುತ್ತಾರೆ:" ಅನೇಕ ರೀತಿಯ ಭೋಗದ ಮತ್ತು ಷೋಕಿಯ ವಸ್ತುಗಳ ತಯಾರಿಕೆಗೆ ಬಡರೈತರ ತೆರಿಗೆಯ ಧನವನ್ನು ವ್ಯಯಮಾಡಿದೆವು. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಭೋಗಜೀವನ ನಡೆಸುವ ಶ್ರೀಮಂತರ ಸುಖಕ್ಕಾಗಿ ಹಳ್ಳಿಗಳನ್ನೂ ರೈತ ವರ್ಗವನ್ನು ಮರೆತು ಬಿಟ್ಟವು. ಅಥವಾ ಮರೆತೇಬಿಟ್ಟೆವು ಎಂಬ ದೂರಿನಿಂದ ಪಾರಾಗುವುದಕ್ಕಾಗಿಯೂ ಮತ್ತು ಅವರು ಸಂಪೂರ್ಣವಾಗಿ ನಿರ್ಜೀವವಾದರೆ ನಮಗಾಗಿ ದುಡಿಯುವವರು ಯಾರೂ ಇಲ್ಲದಂತೆ ಆಗಬಾರದು ಎಂಬುದಕ್ಕಾಗಿಯೂ ಜೀವವಾಡುವಷ್ಟುರಮಟ್ಟಿಗೆ ಅವರ ಭಿಕ್ಷಾಪಾತ್ರೆಗೆ ಕಾಸು ಎಸೆದದ್ದುಂಟು. ನಗರಗಳಲ್ಲಿ ಮಹಾಪರ್ವತೋಪಮ ಕಟ್ಟಡಗಳನ್ನು ಕಟ್ಟುವುದಕ್ಕೆ ನಮಗೆ ದುಡ್ಡು ಇತ್ತು. ಆದರೆ ಹಳ್ಳಿಗಳಲ್ಲಿ ಬಾವಿ ತೋಡಲು ಹಣವಿರಲಿಲ್ಲ. ಯಾವುದಕ್ಕೆ ಮೊದಲ ಗಮನ ಕೊಡಬೇಕಾಗಿತ್ತೊ ಅದಕ್ಕೆ ಕೊಡಲಿಲ್ಲ. ಬಡರೈತನನ್ನು ಹಿಂಡಿ ತೆಗೆದ ತೆರಿಗೆ ದವಸಧಾನ್ಯಗಳು ನಗರಗಳ ಶ್ರೀಮಂತ ವರ್ಗಕ್ಕೂ ಅಧಿಕಾರ ವರ್ಗದ ಧಾಳಾಧೂಳಿಗೂ ವ್ಯಯವಾಯಿತು. ರಾಷ್ಟ್ರಪತಿಯಿಂದ ಹಿಡಿದು ರಾಯಭಾರಿ ಮಂತ್ರಿ, ಲೋಕ ಸಭಾಸದಸ್ಯ ಮೇಲ್ಮನೆ, ಕೆಳಮನೆ, ಐಎಎಸ್, ಐಪಿಎಸ್ ಇತ್ಯಾದಿ ಅಧಿಕಾರಿಗಳ ವರೆಗೆ ಸಮೃದ್ಧ ಸಂಬಳ ಗಿಂಬಳಗಳ ಹಂಚಿಕೆ ನಡೆಯಿತು. ದೊಡ್ಡ ದೊಡ್ಡ ವಿದ್ವತ್ಪೂರ್ಣವಾದ

ಹೆಸರು ಹೊತ್ತ ನಕಲಿ ಸಂಸ್ಥೆಗಳೂ ಈ ಲೂಟಿಯಲ್ಲಿ ಭಾಗಿಯಾಗುವುದನ್ನು ಮರೆಯಲಿಲ್ಲ. ಗ್ರಾಮಸ್ಥ ರಾಜ್ಯ ಪರಿಕಲ್ಪನೆಯ ವಿಕೇಂದ್ರಿಕರಣದ ಸ್ಥಾನದಲ್ಲಿ ಸಂಪೂರ್ಣ ಕೇಂದ್ರೀಕರಣ ಸ್ಥಾಪನೆಯಾಗಿ ದೆಹಲಿಗೆ ಹೋಗಿ ಬರುವುದೆ ಕರ್ತವ್ಯ ಕರ್ಮದ ಪ್ರಧಾನ ಭಾಗವಾಯಿತು ಆಡಳಿತ ಮತ್ತು ನ್ಯಾಯ ವಿತರಣೆಗಳು ಬ್ರಿಟೀಷರ ಕಾಲದಲ್ಲಿದ್ದದಕ್ಕಿಂತಲೂ ಜಟಿಲವಾಗಿ ಅನಕ್ಷರಸ್ಥ ಹಳ್ಳಿಗರು ಅಧಿಕಾರದ ಗಾಣಕ್ಕೆ ಸಿಕ್ಕಿ ನರಳುವಂತಾಯಿತು.[1]" ಕುವೆಂಪು ಅವರ ಮಾತುಗಳು ಸ್ವತಂತ್ರಭಾರತದ ಆಡಳಿತ ವೈಖರಿಯ ಮತ್ತು ಅದರಿಂದ ಭಾರತದ ಹಳ್ಳಿಗಳು ತಲುಪಿರುವ ಪರಿಸ್ಥಿತಿಯ ವಾಸ್ತವಿಕ ವಿಶ್ಲೇಷಣೆ ಮಾಡುತ್ತವೆ. ಕುವೆಂಪು ಅವರು ಮೂಲತಃ ಪ್ರಕೃತಿ ಪ್ರಿಯ ದುಡಿಮೆಯ ವರ್ಗದ ಅಭಿವ್ಯಕ್ತಿಯ ಮೊದಲ ಧ್ವನಿ. ತನ್ನ ನಾಡಿನ ದುಡಿಮೆಗಾರ ರೈತನ ಸ್ಥಿತಿಯನ್ನು ಅತ್ಯಂತ ಆಳದಲ್ಲಿ ಅರ್ಥಮಾಡಿಕೊಳ್ಳಲು ಸದಾ ತುಡಿಯುವ ಮನಸ್ಥಿತಿಯನ್ನು ಇವರು ಹೊಂದಿದ್ದರು. ಯುವರೈತ ಭಾರತದ ಬೆನ್ನೆಲುಬು ಎಂಬುದು ಬರೀ ಮಾತಾಗಿ ಉಳಿಯದೆ ಆ ಬೆನ್ನೆಲುಬು ಗಟ್ಟಿಯಾಗಿರಬೇಕಾದರೆ ಅವನು ಉತ್ತಮ ಸ್ಥಿತಿಯಲ್ಲಿರಬೇಕು ಎಂದು ಹೇಳಹೊರಟರು, ತಮ್ಮ ಗದ್ಯ ಪದ್ಯಗಳಲ್ಲಿ.

ಸ್ವಾತಂತ್ರ್ಯಪೂರ್ವದಿಂದಲೇ ಕುವೆಂಪು ರೈತರ ಪರವಾದ ಸಾಹಿತ್ಯ ಸೃಷ್ಟಿಯಲ್ಲಿ ತೊಡಗಿದ್ದರು. ಸ್ವಾತಂತ್ರಪೂರ್ವದಲ್ಲಿಯೇ ಕುವೆಂಪು ಇಡೀ ಜಗತ್ತು ರೈತನ ಎದೆಯ ಮೇಲೆ ಹೇಗೆ ಭಾರಹಾಕಿ ಕುಳಿತು ಸುಖಜೀವನ ಅನುಭವಿಸುತ್ತಿದೆ ಎಂಬುದನ್ನು ಕಥೆಯಾಗಿ ರೂಪಿಸಿ, ಸಂಕೇತಿಸಿ ಬರೆದರು. ಕನ್ನಡದ ಕಲಾತ್ಮಕ ಕಥೆಗಳಲ್ಲಿ ಒಂದಾದ 'ಧನ್ವಂತರಿಯ ಚಿಕಿತ್ಸೆ 'ದುಡಿಯುವ ವರ್ಗ ಶೋಷಿತ ವಾಗುತ್ತಿರುವ ಚಿತ್ರಣವನ್ನು ನೀಡುವ ಉತ್ತಮ ಬರೆಹ. ಅದರಲ್ಲಿ ಕುವೆಂಪು ಅವರು ರಾಜ್ಯಶಾಹಿ, ನಗರೀಕರಣ ಬದುಕು, ಪುರೋಹಿತಶಾಹಿ ವರ್ಗ - ಇವೆಲ್ಲವೂ ಹೇಗೆ ರೈತನನ್ನು ತಿನ್ನುತ್ತಿವೆ ಎಂಬುದನ್ನು ಪೌರಾಣಿಕ ಪಾತ್ರಗಳ ಆವರಣದಲ್ಲಿ ಅಭಿವ್ಯಕ್ತಿಸಿದ್ದಾರೆ. ಆದರೆ ಅದರಿಂದ ಹೊರಡುವ ಸಮಕಾಲೀನತೆಯೂ ಚಿಂತನಶೀಲತೆಯೂ, ವೈಚಾರಿಕತೆಯೂ ಅಪೂರ್ವ. ವಸ್ತು-ಪಾತ್ರ ಪುರಾಣ ವಾಗಲಿ, ಇತಿಹಾಸವಾಗಲಿ, ಕುವೆಂಪು ತಾನು ನಿಂತ ಬದುಕಿಗೆ ಎಂದೂ ಕುರುಡರಾದವರಲ್ಲ.

"ರೈತನ ಎದೆಯ ಮೇಲೆ ಸಮಸ್ತ ಚಕ್ರಾಧಿಪತ್ಯವೂ ಮಹಾಪರ್ವತಾಕಾರವಾಗಿ ನಿಂತಿತ್ತು. ಋಷಿಗಳು ನೋಡಿಕೊಂಡು ಬಂದಿದ್ದ ಆ ಮುಖ್ಯಪಟ್ಟಣವು ಅದರ ನೆತ್ತಿಯಲ್ಲಿರಾಜಿಸುತ್ತಿದೆ! ಅಲ್ಲಿಯ ದೇವಾಲಯಗಳೂ ವಿದ್ಯಾನಿಲಯಗಳು ಕ್ರೀಡಾ ಮಂದಿರಗಳೂ ಪ್ರಮೋದವನಗಳೂ ಕರ್ಮಸೌಧಗಳೂ, ಕಾರ್ಖಾನೆಗಳೂ ರಾಜ ಪ್ರಸಾದಗಳೂ ತಮ್ಮ ಭಾರವನ್ನೆಲ್ಲಾ ರೈತನ ಎದೆಯ ಮೇಲೆ ಹಾಕಿ, ಸಂಸ್ಕೃತಿ ಮತ್ತು ನಾಗರೀಕತೆ ಎಂಬ ಕೀರ್ತಿಯಿಂದ ಮೆರೆಯುತ್ತಿವೆ"[2]. ಕುವೆಂಪು ಅವರ ಸಾಮಾಜಿಕ ಅರಿವನ್ನು ಈ ಮಾತುಗಳು ಎತ್ತಿ ಹಿಡಿಯುತ್ತವೆ. ಅವರ ಎರಡು ಕಾದಂಬರಿಗಳು

---

1. ವಿಚಾರ ಕ್ರಾಂತಿಗೆ ಆಹ್ವಾನ, ಪುಟ ೩ - ೪

2. ನನ್ನ ದೇವರು ಮತ್ತು ಇತರ ಕತಥೆಗಳು, ಪುಟ ೮೮.

ರೈತನ ಬದುಕಿನ ಸುತ್ತ ಚಿತ್ರಿತವಾಗಿರುವ ಕೃತಿಗಳು. ರೈತ ಮತ್ತು ಅವನನ್ನು ಅಂಟಿಕೊಂಡು ಬದುಕು ಸಾಗಿಸುತ್ತಿರುವ ದಲಿತ ಬದುಕಿನ ಅತ್ಯಂತ ವಿವರಾತ್ಮಕವಾದ ಚಿತ್ರಣವನ್ನು ನಾವು ಕಾದಂಬರಿಗಳಲ್ಲಿ ಕಾಣುತ್ತೇವೆ. ಕುವೆಂಪು ಅವರ ಸೃಜನಶೀಲ ಗದ್ಯದಲ್ಲಿ ಅವರ ವೈಚಾರಿಕತೆಯೂ ಚಿಂತನಶೀಲತೆಯೂ ಎದ್ದುಕಾಣುತ್ತದೆ. ಗದ್ಯಕ್ಕೆ ವಸ್ತುವನ್ನು ವಸ್ತುನಿಷ್ಠವಾಗಿ ನೋಡುವ ವಾಸ್ತವಿಕಪ್ರಜ್ಞೆ ಸಾಧಿತವಾಗಿದೆ. ರೈತನ ಮತ್ತು ದಲಿತರ ಬದುಕನ್ನು ಕುರಿತು ಬರೆಯುತ್ತಿದ್ದರೂ ಕುವೆಂಪು ಅವರ ಒಟ್ಟಾರೆ ಧೋರಣೆ ಮಾನವತೆಯ ಅರಳುವಿಕೆಯ ಕಡೆಗಿದೆ. ರೈತರು ಕುವೆಂಪು ಅವರಿಗೆ ಪ್ರಿಯರಾದರೂ, ರೈತರು ಜಾತಿ ವ್ಯವಸ್ಥೆಯಲ್ಲಿ ತಮಗಿಂತ ಕೆಳಗಿನವರನ್ನು ಶೋಷಣೆ ಮಾಡುವ ಬಗೆಯನ್ನು ಚಿತ್ರಿಸದೆ ಬಿಟ್ಟಿಲ್ಲ. ಸಮಸ್ಯೆಯನ್ನು ಅದರ ಒಟ್ಟಾರೆ ವ್ಯವಸ್ಥೆಯ ಒಂದಂಶವಾಗಿಟ್ಟು ನೋಡುವ ದೃಷ್ಟಿಯಿದು. ಇದರಿಂದಾಗಿ ರೈತನ ಬದುಕು ನೇರ್ಪಾಗಬೇಕಾದರೆ, ಕೇವಲ ಅವನ ಉದ್ಧಾರವಾದರೆ ಮಾತ್ರ ಸಾಧ್ಯವಾಗುದು. ಅವನ ಸುತ್ತಣ ಬದುಕು ಕೂಡ ಅವನ ಜೊತೆ ಜೊತೆಯಲ್ಲಿಯೇ ಉದ್ಧಾರವಾಗಬೇಕೆಂಬ ನ್ಯಾಯಸಮ್ಮತ ಧ್ವನಿಯನ್ನು ಕುವೆಂಪು ಹೊರಡಿಸುತ್ತಾರೆ. ಆದ್ದರಿಂದಲೇ ಕುವೆಂಪು ಮೊದಲ ರೈತಪರ ಲೇಖಕ ಹೇಗೋ ಹಾಗೆಯೇ ಮೊದಲ ದಲಿತಪರ ಲೇಖಕರೂ ಆಗುತ್ತಾರೆ. ನಲವತ್ತು ಐವತ್ತು ವರ್ಷಗಳ ಹಿಂದೆಯೇ ದಲಿತ ಬದುಕಿನ ಬಗ್ಗೆ ದುಡಿಯುವ ಬದುಕಿನ ಬಗ್ಗೆ ಮಾತನಾಡಿದ ಕುವೆಂಪು ನಿಜವಾದ ಅರ್ಥದಲ್ಲಿ ತಮ್ಮ ಕೃತಿಗಳ ಮೂಲಕ ಸಾಮಾಜಿಕವಾದ ಚಿಂತನೆಗೆ, ಮಂಥನಕ್ಕೆ ಜನ ಸಮೂಹವನ್ನು ತೊಡಗಿಸಿದ್ದರು. ರೂಢಿಗತ ವ್ಯವಸ್ಥೆ ಮತ್ತು ಸಾಹಿತ್ಯಕ್ಕೆ ಕುವೆಂಪು ಹೊಸ ಅರ್ಥ ಆಯಾಮಗಳನ್ನು ತಂದುಕೊಟ್ಟಿದ್ದರು.

* * * *

ನವೋದಯ ಕಾಲದ ಕವಿಗಳಲ್ಲಿ ರೈತನ ಬಗ್ಗೆ ಅತಿ ಹೆಚ್ಚು ಕಾವ್ಯ ಸೃಷ್ಟಿಸಿದವರು ಕುವೆಂಪು. ದತ್ತಾತ್ರೇಯ ಬೇಂದ್ರೆಯವರು ತಮ್ಮ 'ಭೂಮಿ ತಾಯಿಯ ಚೊಚ್ಚಿಲ ಮಗ'[3] ಎಂಬ ಪದ್ಯದಲ್ಲಿ ರೈತನ ಬದುಕಿನ ದಾರುಣ ಚಿತ್ರ ನೀಡುತ್ತಾರೆ. ಬರದ ಬವಣೆಯಲ್ಲಿ ರೈತನ ಬದುಕು ಸಾವಿನ ಸ್ಥಿತಿಯನ್ನು ತಲುಪಿದರೂ ಯುಮನಿಗೆ ಕರುಣ ಬಾರದೆ ಅವನನ್ನು ನರಳಿಸುವ ವಾಸ್ತವತೆಯ ಜಂಜಾಟಗಳು ತೀವ್ರತರವಾಗಿವೆ. ಬೇಂದ್ರೆಯವರು ವಾಸ್ತವತೆಯ ಚಿತ್ರಣದಲ್ಲಿ ನಿರಾಶೆಯ ಹಂತವನ್ನು ಮುಟ್ಟುತ್ತಾರೆ.

ಕುವೆಂಪು ಸುಖೀಗ್ರಾಮದರಾಜ್ಯದ ಕನಸನ್ನು ಕಂಡವರು. ಈ ಕನಸನ್ನು ಕಾಣುವಿಕೆ ನವೋದಯ ಕಾಲದ ಒಂದು ಪ್ರಮುಖ ಗುಣವಾಗಿತ್ತು. ಕನಸು ಕಾಣುವುದು ಅವಾಸ್ತವಿಕ ಕ್ರಿಯೆ ಯೇನಲ್ಲ. ಕನಸುಗಳ ಮೂಲಕವೇ ಬದುಕನ್ನು ರೂಪಿಸಬೇಕಾಗುತ್ತದೆ. ಹಸನಾದ ಬದುಕಿನ ಕನಸು ಪ್ರತಿಯೊಬ್ಬ ಚಿಂತಕನ ಆದರ್ಶವೇ ಆಗಿರುತ್ತದೆ. ಮಾರ್ಕ್ಸ್‌ನು ಸಮತಾವಾದದ ಕನಸನ್ನು

---

3. ನಾದಲೀಲೆ, ಪುಟ ೩೬-೩೭

ಕಂಡನು. ಗಾಂಧೀಜಿ ಗ್ರಾಮಸ್ವರಾಜ್ಯದ ಕನಸನ್ನು ಕಂಡರೆ, ಜೆ.ಪಿ., ಲೋಹಿಯಾ ಸಮಾನತಾ ತಳಹದಿಯ ಸುಂದರ ಬದುಕಿನ ಕನಸನ್ನು ಕಂಡರು. ಕನಸುಗಳನ್ನು ಬದುಕಿನಲ್ಲಿ ವಾಸ್ತವಗೊಳಿಸುವುದಕ್ಕಾಗಿಯೇ ವ್ಯಕ್ತಿ ಹೋರಾಟಕ್ಕೆ ತೊಡಗುತ್ತಾನೆ.

ಕುವೆಂಪು ಅವರು ಮೂಲತಃ ಕವಿಯಾದ್ದರಿಂದ ದೇಶ, ಭಾಷೆ, ನೆಲ, ಗಾಳಿಗಳ ಬಗ್ಗೆ ಭಾವನಾತ್ಮಕವಾದ ಅಭಿವ್ಯಕ್ತಿಯನ್ನು ನೀಡಿದರು. ಈ ಭಾವನಾತ್ಮಕ ಗುಣ ರೈತನನ್ನು ಕಂಡಿರುವ ಬಗೆ, ಕುವೆಂಪು ಅವರ ಗದ್ಯದಲ್ಲಿ ಕಂಡಿರುವ ಬಗೆಗಿಂತ ತುಸು ಭಿನ್ನವಾದುದು. ಅದು ಮೂಲಭೂತವಾಗಿ ಕವಿ ಕುವೆಂಪು ಅವರಿಗೂ, ಚಿಂತನ ಶೀಲ ಗದ್ಯಕಾರ ಕುವೆಂಪು ಅವರಿಗೂ ಇರುವ ಅಂತರವಾಗಿದೆ. ಗದ್ಯದಲ್ಲಿ ಕುವೆಂಪು ಅವರು ರೈತನ ಬದುಕನ್ನು ಸಮಸ್ಯೆಯ ಮಧ್ಯೆ ವಿಶ್ಲೇಷಣೆ ಮಾಡತೊಡಗಿದರೆ, ಪದ್ಯಗಳಲ್ಲಿ ತುಂಬ ವ್ಯಕ್ತಿನಿಷ್ಠವಾಗಿ ಕಂಡಿದ್ದಾರೆ. ರೈತ ಕವಿಗೆ ಯೋಗಿಯಂತೆ, ದ್ರಷ್ಟಾರನಂತೆ, ದೇವತೆಯಂತೆ, ದಾತನಂತೆ ಕಂಡಿದ್ದಾನೆ. ದುಡಿಯುವ ರೈತನ ಬವಣೆ ಅನೇಕ ಕವನಗಳಲ್ಲಿ ಚಿತ್ರಣಗೊಂಡಿದ್ದರೂ ಅವನ ಗುಣವರ್ಣನೆ ಪ್ರಮುಖವಾಗುತ್ತದೆ. ಕಾಶಿ, ವೇದ, ತರ್ಕ ಎಲ್ಲಿಯೂ ಕಾಣಸಿಗದ ಸ್ವರ್ಗ ರೈತನ ಉಳುಮೆಯಲ್ಲಿ ಕವಿಗೆ ಗೋಚರಿಸುತ್ತದೆ. ರೈತ ಸಮುದಾಯದಿಂದ ಬಂದ ಕವಿಗೆ ರೈತನ ಮೇಲಿರುವ ಪ್ರೀತಿ ಮೋಹಗಳು ಇದಕ್ಕೆ ಕಾರಣ.

ಕುವೆಂಪು ರೈತನ ದುಡಿಮೆಯನ್ನು 'ಹಸುರು ದುಡಿಮೆ' ಎಂದು ಕರೆದಿರುವುದು ಅವರ ಕವಿ ಮನೋಧರ್ಮಕ್ಕೆ ಸಹಜವಾಗಿದೆ, ದುಡಿಮೆಯನ್ನು ಹಸುರುಗೊಳಿಸುವ ಕ್ರಿಯೆ ರೈತನ ಶಾಂತಿ ಪ್ರಿಯತೆಯನ್ನು ಕೂಡ ಎತ್ತಿ ಹೇಳುತ್ತದೆ. ರೈತನ ಬಗೆಗಿರುವ ಕವಿ ಪ್ರೀತಿಯನ್ನು ಇಲ್ಲಿ ಕಾಣಬಹುದು.

ಸಗ್ಗದ ಬಾಗಿಲು ಅಲ್ಲಿಹುದಣ್ಣಾ!
ನುಗ್ಗಿದರಲ್ಲೆ ತೆರೆಯುವುದಣ್ಣಾ !
ಹಕ್ಕಿಯ 'ಟುವ್ವಿ' ಯೊಳಗವಿತಿದೆಯಣ್ಣಾ
ಹೂವಿನ ಬಣ್ಣ ದೊಳಡಗಿದೆಯಣ್ಣಾ,
ದುಡಿಯುವ ರೈತನ ನೇಗಿಲಲೊಳಡಗಿದೆ,
ಕಡಿಯುವ ಕೂಲಿಯ ಕತ್ತಿಯೊಳಡಗಿದೆ !
ನೇಗಿಲು ಗೆರೆಯೇ ಸಗ್ಗದ ಹಾದಿ,
ಕರ್ಮವೆ ಬಾಗಿಲಿಗೊಯ್ಯುವ ಬೀದಿ;[4]

ಈ ಪದ್ಯದಲ್ಲಿ ರೈತನ 'ಕರ್ಮ'ವನ್ನು ಮತ್ತು ಪ್ರಕೃತಿಯನ್ನು ಸಮೀಕರಿಸಿರುವುದನ್ನು ಗುರುತಿಸಬಹುದು. ಹಕ್ಕಿ ಹೂವು ಮತ್ತು ರೈತನ ನೇಗಿಲು, ಕೂಲಿಯ ಕತ್ತಿ ಸಮಾನ ಸ್ಥಾನದಲ್ಲಿ ನಿಂತು ಅವು 'ಸ್ವರ್ಗದ ಬಾಗಿಲು'ಗಳಾಗುತ್ತವೆ. ರೈತನ ನೇಗಿಲು ವೇದವನ್ನು ಬರೆಯುತ್ತದೆ ಎಂಬ ಕವಿ ಮಾತಿನಲ್ಲಿ ನೇಗಿಲಿಗೆ ಕವಿ ಕೊಟ್ಟಿರುವ ಪ್ರಾಧಾನ್ಯತೆಯನ್ನು ಗುರುತಿಸಬಹುದು.

---

4.ಕೊಳಲು, ಪುಟ ೩೩

ರೈತನ ದುಡಿಮೆಯನ್ನು ಕವಿ ಕುವೆಂಪು ಅವರು ನಿಷ್ಕಾಮ ಕರ್ಮಕ್ಕೆ ಹೋಲಿಸುತ್ತಾರೆ. "ಫಲವನು ಬಯಸದ ಸೇವೆಯೆ ಪೂಜೆಯು! ಕರ್ಮವೆ ಇಹಪರ ಸಾಧನವು...... ನೇಗಿಲ ಕುಳದೊಳಡಗಿದೆ ಕರ್ಮ 'ನೇಗಿಲ ಮೇಲೆಯ ನಿಂತಿದೆ ಧರ್ಮ' 'ಕರ್ಮವೆ ಬಾಗಿಲಿಗೊಯ್ಯುವ ಬೀದಿ'. ರೈತನ ದುಡಿಮೆಯನ್ನು ಕರ್ಮಸಿದ್ಧಾಂತದಡಿಯಲ್ಲಿ ಕುವೆಂಪು ವ್ಯಾಖ್ಯಾನ ಮಾಡುತ್ತಿದ್ದಾರೆನ್ನುವುದಲ್ಲಿ ಅನುಮಾನವಿಲ್ಲ . ಆದರೆ ಕರ್ಮಸಿದ್ದಾಂತ ತನ್ನ ತತ್ವದ ಮರೆಯಲ್ಲಿಯೇ ಶ್ರಮಿಕನನ್ನು ಶೋಷಣೆ ಮಾಡುತ್ತಿದೆಯೆಂಬುದರಲ್ಲಿ ಅನುಮಾನವಿಲ್ಲ. ಪ್ರತಿಯೊಬ್ಬ ಶ್ರಮಿಕನಿಗೂ ಅವನ ದುಡಿಮೆಗೆ ಪ್ರತಿಫಲ ದೊರೆಯುಬೇಕಿರುವುದು ನ್ಯಾಯಸಮ್ಮತ. ರೈತನು ಮತ್ತೆ ಭ್ರಮಾಲೋಕದಲ್ಲಿ ವಿಹರಿಸುವಂತೆ ಮಾಡಿದಂತಾಗಲಿಲ್ಲವೆ ಎಂಬ ಪ್ರಶ್ನೆಮೂಡುತ್ತದೆ. 'ನೇಗಿಲಯೋಗಿ' ಎಂಬ ಕವನ ತನ್ನ ಗೇಯಗುಣದಿಂದ ಓದುಗನನ್ನು ಮೋಡಿ ಹಾಕುವ ಪದ್ಯ. ಆದರೆ ಅಲ್ಲಿ ರೈತ ಒಂದು ಬಗೆಯ 'ಯೋಗಿ'ಯಂತೆ ಚಿತ್ರಿತವಾಗಿದ್ದಾನೆ. ಪದ್ಯದ ಪ್ರಾರಂಭದಲ್ಲೇ ಅವನ ಆದರ್ಶೀಕರಣವಾಗುತ್ತದೆ. ಓದುಗನನ್ನು ರೈತನ ಮಹಿಮೆಯನ್ನು ತಿಳಿದುಕೊಳ್ಳುವಂತೆ ಕವಿ ಆಹ್ವಾನಿಸುತ್ತಾರೆ.

ಲೋಕದೊಳೇನೇ ನಡೆಯುತಲಿರಲಿ
ತನ್ನೀಕಾರ್ಯವ ಬಿಡನೆಂದೂ;
ರಾಜ್ಯಗಳುದಿಸಲಿ ರಾಜ್ಯಗಳಳಿಯಲಿ;
ಹಾರಲಿ ಗದ್ದುಗೆ ಮುಕುಟಗಳು,
ಮುತ್ತಿಗೆ ಹಾಕಲಿ ಸೈನಿಕರೆಲ್ಲ,
ಬಿತ್ತುಳುವುದನವ ಬಿಡುವುದೆ ಇಲ್ಲ.

ಮಾನವ ಕುಲದ ಇತಿಹಾಸದಲ್ಲಿ ರೈತನ ಬದುಕು ಹಾದು ಬಂದ ರೀತಿ ಇದು. ಏನೇ ಪರಿವರ್ತನೆ ಮಾರ್ಪಾಡುಗಳು ಆದರೂ ರೈತನ ಕೆಲಸ ನಿಲ್ಲದೆ ನಿರಂತರವಾಗಿ ನಡೆದು ಬಂದಿದೆ. ದುಡಿಯುವುದನ್ನು ನಿಲ್ಲಿಸದೆ ಜಗದ ಹೊಟ್ಟೆಗೆ ಅನ್ನ ಹಾಕುವ ಕಾಯಕದಲ್ಲಿ ರೈತ ನಿರತನಾಗಿದ್ದಾನೆ. ಅವನು 'ಯಾರೂ ಅರಿಯದ ನೇಗಿಲ ಯೋಗಿ'. ಹೆಸರು' 'ಅತಿಸುಖ' 'ಗೌರವ' - ಯಾವುದನ್ನೂ ಆತ ಬಯಸಲಿಲ್ಲ. ಯಾವ ಋಷಿ ಮುನಿ ಪುಂಗವನಿಗಿಂತಲೂ ತತ್ವಜ್ಞಾನಿ ದಾರ್ಶನಿಕನಿಗಿಂತಲೂ ರೈತ ಎಳ್ಳಷ್ಟೂ ಕಡಿಮೆಯವನಲ್ಲವೆಂಬುದೇ ಕುವೆಂಪು ಅವರ ಆಶಯ. ಯೋಗಿಯಾಗಿ ದುಡಿದರೆ ಭೋಗಿಯಾಗುವನೆಂಬ ಅಂಶವೂ ಇಲ್ಲಿ ಆಡಕವಾಗಿದೆ.

ಭಾವಗೀತೆಗೆ ತಕ್ಕುದಾದ ಭಾವುಕತೆಯೇ ಪ್ರಧಾನ ಅಂಶವಾಗಿರುವ ಹಾಡು, 'ನೇಗಿಲ ಯೋಗಿ' ಕವನದಲ್ಲಿ ಕವಿ ರೈತನನ್ನು ಹಾಡುವಂತೆ ಪ್ರೇರೇಪಿಸುತ್ತಾರೆ. ಅದರಿಂದ 'ಕಣಜ ಕಿಕ್ಕಿರಿ' ಯುತ್ತ[5]ದೆಯೆಂದು ತಿಳಿಸುತ್ತಾರೆ. ಕವಿ ರೈತನನ್ನು ಯಾರಿಗೂ ಕಡಿಮೆಯೆಂದು ಪರಿಗಣಿಸುವುದಿಲ್ಲ.

---

5.ಪ್ರೇತಕ್ಯೂ, ಪು ೧೪

ರೈತ ತನ್ನ ದುಡಿಮೆಯಿಂದ ದೇಶ ಕಟ್ಟುವ ಕೆಲಸದಲ್ಲಿ ಎಲ್ಲರಿಗಿಂತಲೂ ಮಿಗಿಲಾದ ದೇಶ ಸೇವೆಯನ್ನು ಮಾಡಿದ್ದಾನೆ, ಮಾಡುತ್ತಿದ್ದಾನೆ. ಅವನ 'ಉಳುವ ಕುಳದ ಗೆರೆ' ಇಡೀ ನಾಡ ಹಣೆಯ ಬರಹ'ವನ್ನು ಬರೆದಿದೆಯೆಂದು ರೈತನ ದುಡಿಮೆಯನ್ನು ಗುರ್ತಿಸುತ್ತಾರೆ.

ಹೊಲದ ಗಾಂಧಿ, ನೆಲದ ಗಾಂಧಿ,
ನೀನೆ ರಾಷ್ಟ್ರ ಶಕ್ತಿ;
ನೆಹರುಗೇನು ಕಡಿಮೆಯೇನು
ನಿನ್ನ ದೇಶ ಭಕ್ತಿ?
ಅವರೊ ಹೆಸರು ;ನೀನೋ ಉಸಿರು
ನಾಡ ದೇವಿಗೆ;
ನಂದದೆಂದೂ ಕುಂದದಿರುವ
ನಂದಾ ದೀವಿಗೆ! [6.]

(ಕುಳದ ಕಲಿಗೆ)

ರೈತನು ರಾಜಕಾರಣಿಗಳಿಗಿಂತಲೂ ಮಿಗಿಲಾದವನು ಎಂದು ಗುರುತಿಸಿರುವುದು ಅರ್ಥಪೂರ್ಣ 'ಗಾಂಧಿ'ನಮ್ಮ ದೇಶದ ದೊಡ್ಡ ಹೆಸರು, ಚೇತನ ಶಕ್ತಿ. ದೇಶ ಪ್ರೇಮಕ್ಕೆ ಒಂದು ಸಂಕೇತ. ಅಂತಹ ಗಾಂಧಿಗಿಂತ ರೈತನೇನು ಚಿಕ್ಕವನಲ್ಲ ಎಂಬುದು ಕುವೆಂಪು ಅವರ ಧ್ವನಿ. ರೈತನನ್ನು 'ಹೊಲದ ಗಾಂಧಿ, ನೆಲದ ಗಾಂಧಿ' ಎಂದು ಕರೆದಿರುವುದಂತೂ ಔಚಿತ್ಯಪೂರ್ಣ. ಗಾಂಧಿ, ನೆಹರು ಬರೀ ಹೆಸರು: ನೀನೋ ದೇಶದ 'ಉಸಿರು' ಎಂದು ರೈತನನ್ನೂ ಗುರ್ತಿಸಿ ಗೌರವ ನೀಡುತ್ತಾರೆ. ದೇಶ ನಿರ್ಮಾಣ ಕಾರ್ಯದಲ್ಲಿ ರೈತನ ಪಾತ್ರವನ್ನು ಈ ಮಾತುಗಳು ದೃಢೀಕರಿಸುತ್ತವೆ. 'ಹೆಸರಿಲ್ಲದೆ ಹೆಸರರಿಯದೆ! ಹೆಸರೊಲ್ಲದ ನೀನೆ ಮಹಿಮೆ ನಾಡದೇವಿಗೆ ಎಂಬ ಸಾಲುಗಳು ಕುವೆಂಪು ಕಾವ್ಯಶಕ್ತಿಯನ್ನು ಹೇಳುವಂತೆಯೇ ರೈತನ ಕೀರ್ತಿಬಯಸದ ಕಾಯಕ ಮನೋಧರ್ಮವನ್ನು ಬಿಚ್ಚಿಹೇಳುತ್ತವೆ. ಕೋಟಿ ಕೋಟಿ ಜನರಲ್ಲಿ ಲೀನವಾಗಿ ಬಿಡುವಂಥ ಸಿಂಧುವಲ್ಲಿ ಬಿಂದುವಾಗು ವಂತಹ ಜೀವನಕ್ರಮ ರೈತನದು. ಈ ಕವನದ ಕೊನೆಯ ಸಾಲುಗಳು ಕವನದ ಅರ್ಥವನ್ನೇ ಬೆರಗುಗೊಳಿಸುತ್ತವೆ. ರೈತನನ್ನು ಒಂದು ರೀತಿಯಲ್ಲಿ ಮೆಚ್ಚಿಕೊಂಡು ಬಂದ ಕವನ, ಯಜ್ಞದ ಪ್ರತಿಮೆಯಲ್ಲಿ ಆಹುತಿಯಾಗುತ್ತಿರುವ ರೈತನ ಚಿತ್ರವನ್ನು ಮೂಡಿಸಿ, ದುರಂತ ಛಾಯೆಯನ್ನು ಪಡೆದು ಕೊಳ್ಳುತ್ತದೆ.

ಅನ್ನರಣದ ಭಾರತದಲ್ಲಿ
ಕುರುಕ್ಷೇತ್ರದಗ್ನಿಯಲಿ
ಹಲಾಯುಧದ ಭೀಷ್ಮ ಕಲಿ,
ಜಗದ ಸೊಗಕೆ ಬೇಳ್ದ ಬಲಿ
ನಮೋ ನಿನಗೆ, ಧನ್ಯಹಲಿ

---

6.ಕೃತ್ತಿಕೆ, ಪುಟ ೬೪

